| | | |
|---|---|---|
| 2 | ಸರ್ಕಾರಿ ಹೊರವಲಯ ಮುದ್ರಣಾಲಯ, ಮೈಸೂರು ರಸ್ತೆ, ಬೆಂಗಳೂರು | ರೂ. 30,000 |
| 3 | ಸರ್ಕಾರಿ ಪಠ್ಯಪುಸ್ತಕ ಮುದ್ರಣಾಲಯ, ಸರಸ್ವತಿ ಪುರಂ, ಮೈಸೂರು | ರೂ. 30,000 |
| 4 | ಸರ್ಕಾರಿ ಶಾಖಾ ಮುದ್ರಣಾಲಯಗಳಾದ ಧಾರವಾಡ ಮತ್ತು ಗುಲ್ಬರ್ಗಾ ತಲಾ | ರೂ. 20,000 x 2=40,000 |
| 5 | ಸರ್ಕಾರಿ ಶಾಖಾ ಮುದ್ರಣಾಲಯಗಳಾದ ತುಮಕೂರು, ಮಡಿಕೇರಿ, ಮಂಗಳೂರು, ಕೋಲಾರ ಮತ್ತು ಶಿವಮೊಗ್ಗ ತಲಾ | ರೂ. 10,000 x 5=50,000 |

3. ಟೆಂಡರಿನಲ್ಲಿ ಸೂಚಿಸಿರುವ ದರಗಳನ್ನು ನಿರ್ದೇಶಕರು ಯಾವುದೇ ಕಾರಣಗಳನ್ನು ನೀಡದೆ ತಿರಸ್ಕರಿಸಬಹುದಾಗಿದೆ ಹಾಗೂ ಈ ವಿಚಾರದಲ್ಲಿ ಉಂಟಾಗುವ ಯಾವುದೇ ವಿವಾದಗಳಲ್ಲಿ ಈ ಇಲಾಖೆಯ ನಿರ್ದೇಶಕರದೇ ಅಂತಿಮ ತೀರ್ಮಾನವಾಗಿರುತ್ತದೆ. ಮತ್ತು ಟೆಂಡರನ್ನು ಒಪ್ಪುವ ಅಥವಾ ತಿರಸ್ಕರಿಸುವ ಅಧಿಕಾರವು ಈ ಇಲಾಖೆಯ ನಿರ್ದೇಶಕರದ್ದಾಗಿರುತ್ತದೆ.
4. ಟೆಂಡರ್‌ದಾರರು ಮೊಹರಾದ ಟೆಂಡರ್ ಲಕೋಟೆಗಳ ಮೇಲೆ ಬಿಳಿ ಜಲ್ಲಿ ಕಟ್ ಪೀಸ್ ಪೇಪರ್, ವೇಸ್ಟ್ ಪೇಪರ್ ಮತ್ತು ಆಯಿಲ್ಡ್ ಸ್ಪೀಪಿಂಗ್ಸ್ ರೀಲ್ ಪೇಪರ್ ವೇಸ್ಟೇಜ್ ಹಳೆಯ ಗೆಜೆಟ್ ಪ್ರತಿಗಳು ಮತ್ತು ನಿರುಪಯುಕ್ತ ನಮೂನೆಗಳು ಇತ್ಯಾದಿಗಳ ಖರೀದಿಗಾಗಿ ಎಂಬ ಶೀರ್ಷಿಕೆ ಬರಹಗಳೊಂದಿಗೆ ಟೆಂಡರ್ ಲಕೋಟೆ I ಮತ್ತು II ಅನ್ನು ದಿನಾಂಕ : 08-03-2004ರ ಸಂಜೆ 4-30ರ ಒಳಗೆ ನಿರ್ದೇಶಕರು, ಮುದ್ರಣ, ಲೇಖನ, ಸಾಮಗ್ರಿ ಪ್ರಕಟಣೆಗಳ ಕಾರ್ಯಾಲಯ, ಸರ್ಕಾರಿ ಮುದ್ರಣಾಲಯ, ನಂ. 6/ಇ, 1ನೇ ಅಡ್ಡರಸ್ತೆ, ಕೆ.ಐ.ಎ.ಡಿ.ಬಿ., ಪೀಣ್ಯ 1ನೇ ಹಂತ, ತುಮಕೂರು ರಸ್ತೆ, ಬೆಂಗಳೂರು-560 058 ಇಲ್ಲಿಗೆ ತಲುಪುವಂತೆ ಕಳುಹಿಸಿ ಕೊಡತಕ್ಕದ್ದು.
5. ಟೆಂಡರಿನ ಲಕೋಟೆ I ಅನ್ನು ದಿನಾಂಕ : 09-03-2004ರ ಮಧ್ಯಾಹ್ನ 12 ಗಂಟೆಗೆ ನಿರ್ದೇಶಕರು, ಸರ್ಕಾರಿ ಮುದ್ರಣಾಲಯ, ಪೀಣ್ಯ, ಬೆಂಗಳೂರು ಇಲ್ಲಿ ತೆರೆಯಲಾಗುವುದು. ಮೊಹರಾದ ಟೆಂಡರನ್ನು ತೆರೆಯುವಾಗ ಹಾಜರಿರಲು ಇಚ್ಛಿಸುವ ಟೆಂಡರುದಾರರು ಸಂಬಂಧಪಟ್ಟ ಸಂಸ್ಥೆಯ ಗುರುತು ಪತ್ರದೊಂದಿಗೆ ಹಾಜರಾಗಬಹುದು.
6. ಈ ಮೇಲಿನ ಐಟಂಗಳನ್ನು ವೀಕ್ಷಿಸುವಂತಹವರು ಕೆಲಸದ ದಿನಗಳಲ್ಲಿ ಆಯಾ ಮುದ್ರಣಾಲಯಗಳ ಅಧಿಕಾರಿಗಳ ಅಪ್ಪಣೆ ಪಡೆದು ನಂತರ ಈ ಇಲಾಖೆಯ ಮುಖ್ಯ ಸಮಯಪಾಲಕರ ಸಮ್ಮುಖದಲ್ಲಿ ವೀಕ್ಷಿಸಬಹುದಾಗಿದೆ.
7. ಈ ಮೇಲ್ಕಂಡ ಐಟಂಗಳನ್ನು "ವೇಬ್ರಿಡ್ಜ್" ನಲ್ಲಿ ಮಾತ್ರ ತೂಕ ಹಾಕಿಸಿ ಕೊಡಲಾಗುವುದು.
8. ಲಕೋಟೆ-I ನ್ನು ಪೂರ್ಣವಾಗಿ ಪರಿಶೀಲಿಸಿದ ನಂತರ ದಿನಾಂಕ: 11-03-2004 ರಂದು ಮಧ್ಯಾಹ್ನ 12 ಘಂಟೆಗೆ ಲಕೋಟೆ-IIನ್ನು ತೆರೆಯಲಾಗುವುದು.
9. ಪಾರದರ್ಶಕ ನಿಯಮಗಳ ಪ್ರಕಾರ ಟೆಂಡರ್‌ದಾರರು ಸಲ್ಲಿಸಿರುವ ಮೊಹರಾದ ಲಕೋಟೆಯನ್ನು ತೆರೆದಾಗ ಲಕೋಟೆ I ರ ಷರತ್ತುಗಳು ಮತ್ತು ನಿಬಂಧನೆಗಳ ಪೂರ್ಣ ಮಾಹಿತಿಯನ್ನು ಒದಗಿಸಿದ ಟೆಂಡರ್‌ದಾರರ ಲಕೋಟೆ II ನ್ನು ಮಾತ್ರ ತೆರೆಯಲಾಗುವುದು. ಪೂರ್ಣವಾದ ಮಾಹಿತಿಯನ್ನು ಒದಗಿಸದ ಟೆಂಡರನ್ನು ಯಾವುದೇ ಕಾರಣವನ್ನು ನೀಡದೆ ತಿರಸ್ಕರಿಸಲಾಗುವುದು.
10. ಈ ಹಿಂದೆ ಈ ಇಲಾಖೆಯಿಂದ ಮೇಲ್ಕಂಡ ಐಟಂಗಳನ್ನು ಸರಿಯಾಗಿ ವಿಲೇವಾರಿ ಮಾಡದ ಹಾಗೂ ನಿಯಮಾನುಸಾರ ಕ್ರಮಬದ್ಧವಾಗಿ ವ್ಯವಹರಿಸದ ಸಂಸ್ಥೆಗಳು ಮತ್ತು ಈಗಾಗಲೇ ಇದರ ಸಂಬಂಧದಲ್ಲಿ ಭದ್ರತಾ ಠೇವಣಿ ಹಣವನ್ನು ಈ ಇಲಾಖೆಯಿಂದ ಮುಟ್ಟುಗೋಲು ಹಾಕಿಕೊಂಡಿರುವ ಸಂಸ್ಥೆಗಳು ಟೆಂಡರಿನಲ್ಲಿ ಭಾಗವಹಿಸುವಂತಿಲ್ಲ. ಒಂದು ವೇಳೆ ಭಾಗವಹಿಸಿದಲ್ಲಿ ಸದರಿಯವರ ಭದ್ರತಾ ಠೇವಣಿ ಹಣವನ್ನು ಯಾವುದೇ ಸೂಚನೆ ನೀಡದೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
11. ಹೆಚ್ಚಿನ ದರಗಳನ್ನು ಸೂಚಿಸಿ ಈ ದರಗಳನ್ನು ಈ ಇಲಾಖೆಯಲ್ಲಿ ಒಪ್ಪಿದ ನಂತರ ಟೆಂಡರ್‌ದಾರರು ತಮ್ಮದೇ ಹೊಣೆಗಾರಿಕೆಯಲ್ಲಿ ಬಿಳಿ ಜಲ್ಲಿ ಕಟ್ ಪೀಸ್ ಪೇಪರ್, ವೇಸ್ಟ್ ಪೇಪರ್ ಮತ್ತು ಆಯಿಲ್ಡ್ ಸ್ಪೀಪಿಂಗ್ಸ್ ಹಾಗೂ ಬಫ್ ಜಲ್ಲಿ ಕಟ್ ಪೀಸ್ ಪೇಪರ್, ರೀಲ್ ಪೇಪರ್ ವೇಸ್ಟೇಜ್, ಹಳೆಯ ಗೆಜೆಟ್ ಪ್ರತಿಗಳು, ನಿರುಪಯುಕ್ತ ಹಳೆಯ ನಮೂನೆಗಳು ಮತ್ತು ಹಳೆಯ ಪುಸ್ತಕಗಳನ್ನು ಬೇರೆ, ಬೇರೆಯಾಗಿ ವಿಂಗಡಿಸಿ ಬೇರೆ, ಬೇರೆಯಾಗಿಯೇ ಚೀಲ/ಮೂಟೆಗಳನ್ನು ಮಾಡಬೇಕು ಈ ರೀತಿ ಚೀಲ/ಮೂಟೆಗಳನ್ನು ಮಾಡುವಾಗ ಮೇಲ್ಕಂಡ ಐಟಂಗಳ ಜೊತೆಯಲ್ಲಿ ಒಳ್ಳೆಯ ಉಪಯುಕ್ತ ಪೇಪರಾಗಲೀ ಅಥವಾ ಇನ್ನಾವುದೇ ಮುದ್ರಣ ವಸ್ತುಗಳು ಬೇಲುಗಳು/ಮೂಟೆಗಳಲ್ಲಿ ಸೇರದಂತೆ ಅತಿ ಎಚ್ಚರಿಕೆಯಿಂದ ಬೇಲು/ಮೂಟೆ ಮಾಡಬೇಕು ಮತ್ತು ಮೇಲಿನ ಐಟಂಗಳನ್ನು ವಾರಕ್ಕೊಮ್ಮೆ ಅಥವಾ ಒಂದು ಲೋಡು ಶೇಖರಣೆಯಾದ ಕೂಡಲೇ ಒಂದು ದಿನ ಮುಂಚಿತವಾಗಿ ಮುಂಗಡ ಹಣ ಅಥವಾ ಡಿ.ಡಿ.ಯನ್ನು ನೀಡಿ ವಿಲೇವಾರಿ ಮಾಡಬೇಕು. ಇದಕ್ಕೆ ತಪ್ಪಿದಲ್ಲಿ ನಿಮ್ಮದೆ ಹೊಣೆಗಾರಿಕೆಯಲ್ಲಿ ಇತರೆ ವಿಧಾನಗಳ ಮೂಲಕ ವಿಲೇವಾರಿ ಮಾಡಲಾಗುವುದು. ಮತ್ತು ಇವರ ಭದ್ರತಾ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆ ಸಂಸ್ಥೆಯ ಹೆಸರನ್ನು ಈ ಇಲಾಖೆಯ ಕಪ್ಪು ಪಟ್ಟಿಯಲ್ಲಿ ಸೇರಿಸಲಾಗುವುದು.
12. ಅತಿ ಹೆಚ್ಚಿನ ದರಗಳನ್ನು ನೀಡಿದ ಟೆಂಡರನ್ನು ಈ ಇಲಾಖೆಯಲ್ಲಿ ಒಪ್ಪಿದ ನಂತರ ಟೆಂಡರ್‌ದಾರರು ಮುದ್ರಣಾಲಯವಾರು ರೂ. 200/-(ಎರಡು ನೂರು ರೂಪಾಯಿಗಳು ಮಾತ್ರ) ಛಾಪಾ ಕಾಗದದಲ್ಲಿ ದರಗಳು ಮತ್ತು ನಿಬಂಧನೆಗಳ ಬಗ್ಗೆ ಈ

ಇಲಾಖೆಯೊಂದಿಗೆ ದರ ಕರಾರು ಮಾಡಿಕೊಳ್ಳತಕ್ಕದ್ದು, ಹೆಚ್ಚಿನ ಮಾಹಿತಿಯನ್ನು ಈ ಕಛೇರಿಯ ಕೆಲಸದ ದಿನದಂದು ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ಪಡೆಯಬಹುದಾಗಿದೆ.

13. ಟೆಂಡರ್‌ದಾರರು ತಮ್ಮ ದರ ಪಟ್ಟಿಯಲ್ಲಿ ದರಗಳನ್ನು ಬೆರಳಚ್ಚು ಮಾಡಿಸಿದ ಟೆಂಡರನ್ನು ಸಲ್ಲಿಸಬೇಕು.

**ನಿರ್ದೇಶಕರು**

**OFFICE OF THE DIRECTOR OF PRINTING, STATIONERY AND PUBLICATIONS**

**Government Press, No. 6/E, Ist Cross, K.I.A.D.B. Peenya Ist Stage, Tumkur Road, Bangalore-560 058**

**BRIEF TENDER NOTIFICATION**

**No. P 4178/2003-04 Date: 07th February 2004**

Sealed Tenders are invited in cover I & II from the Paper Manufacturing Mills & Card Board Industries, by the Director of Printing, Stationery & Publications, Government Central Press, No. 6/E, 1st Cross, KIADB, 1st Stage, Tumkur Road, Peenya, Bangalore-560 058. Upto 4-30 P.M. on 08-03-2004 for the clearance of (1) White Jelly cut pice paper, waste paper & oiled sweepings & buff jelly cut piece paper (2) Reel Paper Wastages (3) Old Gazette copies (4) Old obsolute unused forms (5) and old obsolute unused books during the period from 01-04-2004 to 31-03-2005 at Government Central Press, Peenya, Bangalore, Government Sub-urban Press, Mysore Road, Bangalore, Government Press, Vidhana Soudha Unit, Bangalore, Government Press, Peenya Shed, Bangalore, Government Text Book Press, Saraswathipuram, Mysore & also Government Branch Presses at Dharwad, Gulbarga, Madikeri, Tumkur, Kolar, Mangalore & Shimoga. The Sealed Tenders should be accompany of E.M.D. of 1,90,000.00 (Rupees One lakh Ninty thousand) only in cover I in the form of Bank Demand Draft in favour of The Director, Printing, Stationery & Publication, Government Central Press, Peenya, Bangalore-58. The Sealed Tender Cover-I will be opened on 09-03-2004 at 12-00 noon and cover II will be opened on 11-03-2004 at 12-00 noon. Detailed of the Tender Notification can be seen on the Notice Board of the Government Central Press, No. 6/E, 1st Cross KIADB, Peenya 1st Stage, Tumkur Road, Bangalore-560058. during the working hours of this Office.

PR-102 **Director**

**ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ನಿರ್ದೇಶಕರ ಕಾರ್ಯಾಲಯ**

**ಸರ್ಕಾರಿ ಮುದ್ರಣಾಲಯ, ನಂ. 6/ಇ, 1ನೇ ಅಡ್ಡರಸ್ತೆ, ಕೆ.ಐ.ಎ.ಡಿ.ಬಿ. ಪೀಣ್ಯ 1ನೇ ಹಂತ, ತುಮಕೂರು ರಸ್ತೆ, ಬೆಂಗಳೂರು-560 058**

**ಸಂಕ್ಷಿಪ್ತ ಟೆಂಡರ್ ಅಧಿಸೂಚನೆ**

**ಸಂ. ಪಿ. 4220/2003-04, ದಿನಾಂಕ: 11ನೇ ಫೆಬ್ರವರಿ 2004**

2004-2005ನೇ ಸಾಲಿಗೆ ಅಂದರೆ ದಿನಾಂಕ: 1.4.2004 ರಿಂದ 31.3.2005 ರವರೆಗೆ ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ನಿರ್ದೇಶಕರ ಕಾರ್ಯಾಲಯ, ಸರ್ಕಾರಿ ಕೇಂದ್ರ ಮುದ್ರಣಾಲಯ, ಪೀಣ್ಯ, ಬೆಂಗಳೂರು, ಸರ್ಕಾರಿ ಕೇಂದ್ರ ಮುದ್ರಣಾಲಯ, ಪೀಣ್ಯ ಶೆಡ್, ಬೆಂಗಳೂರು, ಸರ್ಕಾರಿ ಹೊರವಲಯ ಮುದ್ರಣಾಲಯ, ಮೈಸೂರು ರಸ್ತೆ, ಬೆಂಗಳೂರು ಹಾಗೂ ಶಾಖಾ ಮುದ್ರಣಾಲಯಗಳಾದ ಧಾರವಾಡ, ಗುಲ್ಬರ್ಗ, ಮಡಿಕೇರಿ, ತುಮಕೂರು, ಕೋಲಾರ, ಮಂಗಳೂರು ಮತ್ತು ಶಿವಮೊಗ್ಗ ಇಲ್ಲಿಗೆ ಮೈಸೂರು ಪೇಪರ್ ಮಿಲ್ಸ್ ಲಿಮಿಟೆಡ್ ಪೇಪರ್ ಟೌನ್ ಭದ್ರಾವತಿಯಿಂದ ಕಾಗದ ಬಂಡಲ್ ಸಾಗಾಣಿಕೆ ಮಾಡಲು ನೋಂದಾಯಿತ ಸ್ವಂತ ವಾಹನಗಳನ್ನು ಹೊಂದಿರುವ ಸ್ಥಳೀಯ ಸಾಗಾಣಿಕೆ ಕಂಪನಿದಾರರಿಂದ ದಿನಾಂಕ: 12.3.2004 ರ ಮಧ್ಯಾಹ್ನ 4.30 ರವರೆಗೆ ಮೊಹರಾದ ಟೆಂಡರ್ ಅನ್ನು ಲಕೋಟೆ-I ಮತ್ತು ಲಕೋಟೆ-II ನ್ನು ಸ್ವೀಕರಿಸಲಾಗುವುದು. ಟೆಂಡರ್‌ನ ಲಕೋಟೆ-I ರ ಜೊತೆಯಲ್ಲಿ ರೂ. 10,000/- (ಮೊಬಲಗು ಹತ್ತು ಸಾವಿರದ ರೂಪಾಯಿಗಳು) ಮಾತ್ರ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟನ್ನು ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು-58, ಇವರ ಹೆಸರಿಗೆ ಪಡೆದು ಲಗತ್ತಿಸಬೇಕು. ಮತ್ತು ಮೊಹರಾದ ಟೆಂಡರ್ ಲಕೋಟೆ-I ಮತ್ತು ಲಕೋಟೆ-II ನ್ನು ನಿರ್ದೇಶಕರು, ಸರ್ಕಾರಿ ಕೇಂದ್ರ ಮುದ್ರಣಾಲಯ, ನಂ. 6ಇ, 1ನೇ ಅಡ್ಡರಸ್ತೆ, ಕೆ.ಐ.ಎ.ಡಿ.ಬಿ. ಪೀಣ್ಯ 1ನೇ ಹಂತ, ತುಮಕೂರು ರಸ್ತೆ ಬೆಂಗಳೂರು-560 058 ಇಲ್ಲಿಗೆ ಕಳುಹಿಸಿಕೊಡತಕ್ಕದ್ದು. ಮೊಹರಾದ ಲಕೋಟೆ-I ನ್ನು ದಿನಾಂಕ: 15.3.2004 ರ ಮಧ್ಯಾಹ್ನ 12.00 ಘಂಟೆಗೆ ನಿರ್ದೇಶಕರು, ಸರ್ಕಾರಿ ಮುದ್ರಣಾಲಯ, ಪೀಣ್ಯ, ಬೆಂಗಳೂರು ಇಲ್ಲಿ ತೆರೆಯಲಾಗುವುದು. ಲಕೋಟೆ-II ಅನ್ನು ದಿನಾಂಕ: 17.3.2004 ರ ಮಧ್ಯಾಹ್ನ 12.00 ಘಂಟೆಗೆ ತೆರೆಯಲಾಗುವುದು. ಮೇಲ್ಕಂಡ ವಿಷಯದ ಬಗ್ಗೆ ಹೆಚ್ಚಿನ ಮಾಹಿತಿಯನ್ನು ನಿರ್ದೇಶಕರು, ಸರ್ಕಾರಿ ಮುದ್ರಣಾಲಯ, ಪೀಣ್ಯ, ತುಮಕೂರು ರಸ್ತೆ, ಬೆಂಗಳೂರು ಇಲ್ಲಿನ ಪ್ರಕಟಣಾ ಫಲಕದಲ್ಲಿ ಈ ಕಛೇರಿಯ ಕೆಲಸದ ವೇಳೆಯಲ್ಲಿ ನೋಡಬಹುದಾಗಿದೆ.

**ನಿರ್ದೇಶಕರು**

## ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ನಿರ್ದೇಶಕರ ಕಾರ್ಯಾಲಯ
## ಸರ್ಕಾರಿ ಮುದ್ರಣಾಲಯ, ನಂ. 6/ಇ, 1ನೇ ಅಡ್ಡರಸ್ತೆ, ಕೆ.ಐ.ಎ.ಡಿ.ಬಿ. ಪೀಣ್ಯ 1ನೇ ಹಂತ,
## ತುಮಕೂರು ರಸ್ತೆ, ಬೆಂಗಳೂರು-560 058
## ಕಾಗದ ಸಾಗಾಣಿಕೆ ಟೆಂಡರ್ ಅಧಿಸೂಚನೆ
## ಸಂ. ಪಿ. 4220/2003-04, ದಿನಾಂಕ: 11ನೇ ಫೆಬ್ರವರಿ 2004

2004-2005ನೇ ಸಾಲಿನಲ್ಲಿ ಮೈಸೂರು ಪೇಪರ್ ಮಿಲ್ಸ್ ಲಿಮಿಟೆಡ್, ಭದ್ರಾವತಿಯಿಂದ ಸರ್ಕಾರಿ ಮುದ್ರಣಾಲಯ, ಬೆಂಗಳೂರು ಹಾಗೂ ಸರ್ಕಾರಿ ಶಾಖಾ ಮುದ್ರಣಾಲಯಗಳಿಗೆ ಪೇಪರು ಬಂಡಲ್‌ಗಳನ್ನು ಹಾಗೂ ರೀಲ್‌ಗಳನ್ನು ಲಾರಿಗಳ ಮೂಲಕ ಸಾಗಾಣಿಕೆ ಮಾಡಬೇಕಾಗಿದ್ದು ನೋಂದಾಯಿತ ಸ್ವಂತ ವಾಹನಗಳನ್ನು ಹೊಂದಿರುವ ಸ್ಥಳೀಯ ಸಾಗಾಣಿಕೆ ಕಂಪನಿದಾರರಿಂದ ಟೆಂಡರ್‌ನ್ನು ಕರೆಯಲಾಗಿದೆ. ಟೆಂಡರ್‌ನ್ನು ಈ ಕೆಳಕಂಡ ಅರ್ಹತೆಯ ಆಧಾರದ ಮೇಲೆ ಮೊಹರಾದ ಲಕೋಟೆ-1 ಮತ್ತು ಲಕೋಟೆ-2 ರಲ್ಲಿ ಸಲ್ಲಿಸಬೇಕಾಗುತ್ತದೆ.

### ಲಕೋಟೆ-1 ರ ಷರತ್ತುಗಳು

1) ಟೆಂಡರ್‌ದಾರರು ಕನಿಷ್ಠ ಪಕ್ಷ 2 ಸ್ವಂತ ಟ್ರಕ್‌ಗಳನ್ನು ಹೊಂದಿರಬೇಕು ಮತ್ತು ಆ ಬಗ್ಗೆ ದೃಢೀಕರಣ ಪತ್ರ ಲಗತ್ತಿಸಿರಬೇಕು.
2) ಕರ್ನಾಟಕ ಮಾರಾಟ ತೆರಿಗೆಯ ನೋಂದಾಯಿತ ದೃಢೀಕರಣ ಪ್ರತಿ ಹಾಗೂ ನಮೂನೆ ಸಂಖ್ಯೆ 3 ರಲ್ಲಿ (ಡಿಸೆಂಬರ್ 2003) ರ ನವೀಕರಣ ಪ್ರತಿ (ವಾರ್ಷಿಕ ಆದಾಯ ತೆರಿಗೆ ಸಂದಾಯ ಪ್ರತಿಗಳನ್ನು) ವಾರ್ಷಿಕ ವರದಿಯೊಂದಿಗೆ ಆದಾಯ ತೆರಿಗೆ ಅಧಿಕಾರಿಗಳಿಂದ ದೃಢೀಕರಿಸಿದ ಬಗ್ಗೆ ಪ್ರಮಾಣ ಪತ್ರವನ್ನು ಲಗತ್ತಿಸಿರಬೇಕು.
3) ಆರ್ಥಿಕ ವರ್ಷ 2001-2002, 2002-2003 ಮತ್ತು 2003-2004ರ ಆದಾಯ ತೆರಿಗೆಯನ್ನು ಪಾವತಿ ಮಾಡಿರುವ ಬಗ್ಗೆ ಸ್ವೀಕೃತಿ ಪ್ರತಿಯನ್ನು ಲಗತ್ತಿಸಿರಬೇಕು.
4) ಕಳೆದ 3 ವರ್ಷಗಳ ಲಾಭ ಮತ್ತು ನಷ್ಟಗಳ ಬಗ್ಗೆ ಲೆಕ್ಕ ಪರಿಶೋಧಕರಿಂದ ದೃಢೀಕರಣ ಪತ್ರ ಹಾಗೂ ರೂ. 8 ಲಕ್ಷದಷ್ಟು ವಾರ್ಷಿಕ ವ್ಯವಹಾರ ಮಾಡಿರುವುದರ ಬಗ್ಗೆ ಚಾರ್ಟೆಡ್ ಅಕೌಂಟೆಂಟ್‌ರವರಿಂದ ದೃಢೀಕರಣ ಪತ್ರವನ್ನು ಲಗತ್ತಿಸಿರಬೇಕು.
5) ಟೆಂಡರ್‌ದಾರರು ಗರಿಷ್ಠ 5 ವರ್ಷಗಳ ಅನುಭವವನ್ನು ಹೊಂದಿರಬೇಕು ಮತ್ತು ಸಾಮಾನ್ಯ ಪರಿಶೀಲನೆಗಾಗಿ ಕನಿಷ್ಠ ಪಕ್ಷ 2 ವರ್ಷಗಳ ಅನುಭವದ ಪ್ರಮಾಣ ಪತ್ರವನ್ನು ಲಗತ್ತಿಸಿರಬೇಕು.
6) ಟೆಂಡರ್‌ದಾರರು ಟೆಂಡರಿನ ಜೊತೆಯಲ್ಲಿ ರೂ. 10,000 (ಹತ್ತು ಸಾವಿರ ರೂಪಾಯಿಗಳು ಮಾತ್ರ) ಗಳ ಡಿ.ಡಿ. ಯನ್ನು ನಿರ್ದೇಶಕರು, ಸರ್ಕಾರಿ ಮುದ್ರಣಾಲಯ, ಪೀಣ್ಯ, ಬೆಂಗಳೂರು ಇವರ ಹೆಸರಿನಲ್ಲಿ ಪಡೆದು ಲಗತ್ತಿಸಿರಬೇಕು. ನಗದು ರೂಪದಲ್ಲಿ ಹಣವನ್ನು ಸ್ವೀಕರಿಸುವುದಿಲ್ಲ, ಡಿಮ್ಯಾಂಡ್ ಡ್ರಾಫ್ಟ್ ಲಗತ್ತಿಸದೆ ಟೆಂಡರನ್ನು ತಿರಸ್ಕರಿಸಲಾಗುವುದು.

### ಲಕೋಟೆ-2ರ ಷರತ್ತುಗಳು

1) ಟೆಂಡರ್‌ದಾರರು ಪ್ರತಿ ಮೆಟ್ರಿಕ್ ಟನ್‌ಗೆ / ಪೂರ್ತಿ ಲೋಡ್‌ಗೆ ಹಾಗೂ ಪಾರ್ಟ್‌ಲೋಡು ಡೋರ್ ಡೆಲಿವರಿ ಆಧಾರದ ಮೇಲೆ ಲೋಡಿಂಗ್ ಮತ್ತು ಅನ್ ಲೋಡಿಂಗ್ ದರಗಳನ್ನು ನೀಡಿರಬೇಕು ದರಗಳನ್ನು ಅಂಕಿ ಮತ್ತು ಅಕ್ಷರಗಳಿಂದ ಬರೆದಿರಬೇಕು.
2) ಮೊಹರಾದ ಟೆಂಡರ್ ಲಕೋಟೆ ಮೇಲೆ ಲಕೋಟೆ-1 ಮತ್ತು ಲಕೋಟೆ-2 ಎಂದು ಹಾಗೂ "ಮೈಸೂರು ಪೇಪರ್ ಮಿಲ್ಸ್, ಪೇಪರ್ ಟೌನ್, ಭದ್ರಾವತಿಯಿಂದ ಸರ್ಕಾರಿ ಪಠ್ಯ ಪುಸ್ತಕ ಮುದ್ರಣಾಲಯ, ಸರಸ್ವತಿಪುರಂ, ಮೈಸೂರು ಇಲ್ಲಿಗೆ ಪೇಪರು ಮತ್ತು ರೀಲ್‌ಗಳನ್ನು ಸಾಗಾಣಿಕೆ ಮಾಡುವ ಬಗ್ಗೆ" ಎಂದು ನಮೂದಿಸಿರಬೇಕು.
3) ಮೊಹರಾದ ಟೆಂಡರ್‌ಗಳನ್ನು ದಿನಾಂಕ: 12.3.2004 ರಂದು ಸಾಯಂಕಾಲ 4.30 ರವರೆಗೆ ಸ್ವೀಕರಿಸಲಾಗುವುದು, ಮೊಹರಾದ ಟೆಂಡರ್ ಲಕೋಟೆ-1ನ್ನು ದಿನಾಂಕ: 15.3.2004 ರ ಮಧ್ಯಾಹ್ನ 12.00 ಗಂಟೆಗೆ ತೆರೆಯಲಾಗುವುದು. ಲಕೋಟೆ-1ನ್ನು ಸಂಪೂರ್ಣವಾಗಿ ಪರಿಶೀಲಿಸಿದ ನಂತರ ಮೊಹರಾದ ಲಕೋಟೆ-2ನ್ನು ದಿನಾಂಕ: 17.3.2004 ರಂದು ಮಧ್ಯಾಹ್ನ 12.00 ಗಂಟೆಗೆ ನಿರ್ದೇಶಕರು ಸರ್ಕಾರಿ ಮುದ್ರಣಾಲಯ, ಪೀಣ್ಯ, ಬೆಂಗಳೂರು, ಇಲ್ಲಿ ತೆರೆಯಲಾಗುವುದು.
4) ಟೆಂಡರ್‌ನ್ನು ತೆರೆಯುವಾಗ ಹಾಜರಾಗುವ ಟೆಂಡರ್‌ದಾರರು ಅಥವಾ ಅವರ ಪ್ರತಿನಿಧಿಗಳು ಆಯಾ ಸಂಸ್ಥೆಯ ಗುರುತು ಪತ್ರದೊಂದಿಗೆ ಹಾಜರಾಗತಕ್ಕದ್ದು.
5) ಈ ಟೆಂಡರಿನ ಅವಧಿಯು 2004-2005ರ ಆರ್ಥಿಕ ವರ್ಷ ಮುಗಿಯುವವರೆಗೆ ಅಥವಾ ಮುಂದಿನ ಆದೇಶದವರೆಗೆ ಜಾರಿಯಲ್ಲಿರುತ್ತದೆ.
6) ಟೆಂಡರ್‌ನ್ನು ಯಾವುದೇ ಕಾರಣಗಳನ್ನು ನೀಡದೆ ನಿರ್ದೇಶಕರು ಒಪ್ಪಬಹುದು ಅಥವಾ ತಿರಸ್ಕರಿಸಬಹುದಾಗಿದೆ. ಮತ್ತು ಟೆಂಡರ್‌ನ್ನು ಒಪ್ಪುವ ಅಥವಾ ತಿರಸ್ಕರಿಸುವ ಅಧಿಕಾರವು ಈ ಇಲಾಖೆಯ ನಿರ್ದೇಶಕರದ್ದೇ ಆಗಿರುತ್ತದೆ. ಟೆಂಡರಿನಲ್ಲಿ ಸೂಚಿಸಿರುವ ದರಗಳನ್ನು ನಿರ್ದೇಶಕರು ಯಾವುದೇ ಕಾರಣಗಳನ್ನು ನೀಡದೆ ತಿರಸ್ಕರಿಸಬಹುದಾಗಿದೆ. ಹಾಗೂ ಈ ವಿಚಾರದಲ್ಲಿ ಉಂಟಾಗುವ ಯಾವುದೇ ವಿವಾದಗಳಲ್ಲಿ ಈ ಇಲಾಖೆಯ ನಿರ್ದೇಶಕರದ್ದೇ ಅಂತಿಮ ತೀರ್ಮಾನವಾಗಿರುತ್ತದೆ.
7) ಪಾರದರ್ಶಕ ನಿಯಮಗಳ ಪ್ರಕಾರ ಟೆಂಡರ್‌ದಾರರು ಸಲ್ಲಿಸಿರುವ ಮೊಹರಾದ ಲಕೋಟೆಯನ್ನು ತೆರೆದಾಗ ಲಕೋಟೆ-1ರ ಷರತ್ತುಗಳು ಮತ್ತು ನಿಬಂಧನೆಗಳ ಪೂರ್ಣ ಮಾಹಿತಿಯನ್ನು ಒದಗಿಸಿರುವ ಟೆಂಡರ್‌ದಾರರ ಲಕೋಟೆ-2ನ್ನು ಮಾತ್ರ ತೆರೆಯಲಾಗುವುದು. ಪೂರ್ಣವಾದ ಮಾಹಿತಿಯನ್ನು ಒದಗಿಸದ ಟೆಂಡರನ್ನು ಯಾವುದೇ ಕಾರಣವನ್ನು ನೀಡದೆ ತಿರಸ್ಕರಿಸಲಾಗುವುದು.

8) ಈ ಅಧಿಸೂಚನೆ ಪ್ರಕಾರ ನೀಡಿರುವ ಸಾಗಾಣಿಕೆ ದರವು ದಿನಾಂಕ: 1.4.2004 ರಿಂದ 31.3.2005 ರವರೆಗೆ ಸಿಂಧುತ್ವದಲ್ಲಿರುತ್ತದೆ. ಯಾವುದೇ ಕಾರಣಕ್ಕೆ ದರದಲ್ಲಿ ಬದಲಾವಣೆ ಮಾಡಲಾಗುವುದಿಲ್ಲ.

9) ಜಯಶಾಲಿಗಳಾದ ಸಾಗಾಣಿಕೆದಾರರು ಮೈಸೂರು ಪೇಪರ್ ಮಿಲ್ಸ್ ಭದ್ರಾವತಿಯಿಂದ ಸರ್ಕಾರಿ ಪಠ್ಯ ಪುಸ್ತಕ ಮುದ್ರಣಾಲಯ, ಸರಸ್ವತಿಪುರಂ, ಮೈಸೂರು ಮುದ್ರಣಾಲಯಕ್ಕೆ ಪೇಪರು / ಬಂಡಲು / ರೀಲುಗಳನ್ನು ಸರಿಯಾಗಿ ಸಾಗಾಣಿಕೆ ಮಾಡದೆ ಇದ್ದಲ್ಲಿ / ಟ್ರಕ್‌ಗಳನ್ನು ಸಕಾಲದಲ್ಲಿ ಮೈಸೂರು ಪೇಪರ್ ಮಿಲ್ಸ್ ಭದ್ರಾವತಿ ಇವರಿಗೆ ಒದಗಿಸದಿದ್ದಲ್ಲಿ ಅವರು ನೀಡಿರುವ ಭದ್ರತಾ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಅವರ ಹೆಸರನ್ನು ಈ ಕಛೇರಿಯ ಕಪ್ಪು ಪಟ್ಟಿಯಲ್ಲಿ ಸೇರಿಸಲಾಗುವುದು.

10) ಜಯಶಾಲಿಗಳಾದ ಟೆಂಡರುದಾರರು ರೂ. 100/- (ರೂಪಾಯಿ ಒಂದು ನೂರು) ರ ಛಾಪ ಕಾಗದದಲ್ಲಿ ಒಪ್ಪಂದದ ಕರಾರು ಪತ್ರದೊಂದಿಗೆ ಈ ಕೆಳಗೆ ತಿಳಿಸಿದ ಮುದ್ರಣಾಲಯವಾರು ಬಡ್ಡಿರಹಿತ ಭದ್ರತಾ ಠೇವಣಿಯನ್ನು, ನಿರ್ದೇಶಕರು ಸರ್ಕಾರಿ ಮುದ್ರಣಾಲಯ ಪೀಣ್ಯ, ಬೆಂಗಳೂರು, ಇವರ ಹೆಸರಿನಲ್ಲಿ ಭದ್ರತಾ ಠೇವಣಿ ರೂ. 10,000/- (ರೂಪಾಯಿ ಹತ್ತು ಸಾವಿರ) ಮಾತ್ರ ಡಿ.ಡಿ. ಯನ್ನು ಸಲ್ಲಿಸಬೇಕು.

11) ಆದಾಯ ತೆರಿಗೆಯನ್ನು ನಿಯಮಾನುಸಾರ ಕಟಾಯಿಸಲಾಗುತ್ತದೆ.

| ಕ್ರಮ ಸಂಖ್ಯೆ | ಮುದ್ರಣಾಲಯಗಳ ಹೆಸರು | ಭದ್ರತಾ ಠೇವಣಿ ರೂಪಾಯಿ |
|---|---|---|
| 1 | ಸರ್ಕಾರಿ ಮುದ್ರಣಾಲಯ, ಪೀಣ್ಯ, ಬೆಂಗಳೂರು | ರೂ. 40,000 |
| 2 | ಸರ್ಕಾರಿ ಲೇಖನ ಸಾಮಗ್ರಿ ಮಳಿಗೆ, ಬೆಂಗಳೂರು | |
| 3 | ಸರ್ಕಾರಿ ಹೊರವಲಯ ಮುದ್ರಣಾಲಯ, ಮೈಸೂರು ರಸ್ತೆ, ಬೆಂಗಳೂರು | |
| 4 | ಸರ್ಕಾರಿ ಶಾಖಾ ಮುದ್ರಣಾಲಯ, ಧಾರವಾಡ | ರೂ. 25,000 |
| 5 | ಸರ್ಕಾರಿ ಶಾಖಾ ಮುದ್ರಣಾಲಯ, ಗುಲ್ಬರ್ಗಾ | ರೂ. 25,000 |
| 6 | ಸರ್ಕಾರಿ ಶಾಖಾ ಮುದ್ರಣಾಲಯ, ತುಮಕೂರು | ರೂ. 25,000 |
| 7 | ಸರ್ಕಾರಿ ಶಾಖಾ ಮುದ್ರಣಾಲಯ, ಕೋಲಾರ | ರೂ. 10,000 |
| 8 | ಸರ್ಕಾರಿ ಶಾಖಾ ಮುದ್ರಣಾಲಯ, ಮಡಿಕೇರಿ | ರೂ. 10,000 |
| 9 | ಸರ್ಕಾರಿ ಶಾಖಾ ಮುದ್ರಣಾಲಯ, ಮಂಗಳೂರು | ರೂ. 10,000 |
| 10 | ಸರ್ಕಾರಿ ಶಾಖಾ ಮುದ್ರಣಾಲಯ, ಶಿವಮೊಗ್ಗ | ರೂ. 10,000 |

ಹೆಚ್ಚಿನ ಮಾಹಿತಿಯನ್ನು ಈ ಕಛೇರಿಯಿಂದ ಯಾವುದೇ ಕೆಲಸದ ದಿನದಂದು ಸಂಪರ್ಕಿಸಿ ಪಡೆಯಬಹುದು.

**ನಿರ್ದೇಶಕರು**

**OFFICE OF THE DIRECTOR OF PRINTING, STATIONERY AND PUBLICATIONS**
**Government Press, No. 6/E, Ist Cross, K.I.A.D.B. Peenya Ist Stage,**
**Tumkur Road, Bangalore-560 058**

## BRIEF TENDER NOTIFICATION

**No. P 4220/2003-04 Date: 11th February 2004**

Sealed Tenders are invited in cover I & II from the local transporters having at least two own vehicles by the Director of Printing, Stationery & Publications, Government Central Press, No. 6/E, 1st Cross, KIADB, 1st Stage, Tumkur Road, Peenya, Bangalore-560 058. Upto 4-30 P.M. on 12-03-2004 for the transportation of Paper bundles, bales and rules during the period from 01-04-2004 to 31-03-2005 at Government Central Press, Peenya, Bangalore, Government Sub-urban Press, Mysore Road, Bangalore, Government Stationery Depot, Bangalore, Government Press, Peenya Shed, Bangalore, and also Government Branch Press at Dharwad, Gulbarga, Madikeri, Tumkur, Kolar, Mangalore & Shimoga. The Sealed Tenders should be accompany of E.M.D. of Rs. 10,000-00 (Rupees Ten thousand) only in cover I in the form of Bank Demand Draft in favour of the Director, Printing, Stationery & Publication, Government Central Press, Peenya, Bangalore-58. The Sealed Tender Cover-I will be opened on 15-03-2004 at 12-00 noon and cover II will be opened on 17-03-2004 at 12-00 noon. Detailed of the Tender Notification can be seen on the Notice Board of the Government Central Press, No. 6/E, Ist Cross KIADB, Peenya Ist Stage, Tumkur Road, Bangalore-560 058, during the working hours of this Office.

PR-111 **Director**

**ಸಹಾಯಕ ಕೃಷಿ ನಿರ್ದೇಶಕರು, ಕೃಷಿ ಅಭಿವೃದ್ಧಿ ಕೇಂದ್ರ, ತ್ಯಾವಣಿಗಿ, ಚನ್ನಗಿರಿ ತಾಲ್ಲೂಕು, ದಾವಣಗೆರೆ ಜಿಲ್ಲೆ**

## ಹರಾಜು ಪ್ರಕಟಣೆ

**ಸಂಖ್ಯೆ: ಸಕೃನಿ:ಕೃಅಕೇ-ತ್ಯಾ:ಉಗ್ರಾಣ:ನಿ:ವಸ್ತು:ಹ:2001-02, ದಿನಾಂಕ: 21ನೇ ಡಿಸೆಂಬರ್ 2001**

**ಸಂಖ್ಯೆ: ಜಕೃನಿ: ದಾಸಕೃನಿ: ಎಡಿಸಿ: ತ್ಯಾ: ಉಗ್ರಾಣ: ಅ. ವಿಲೇವಾರಿ 2001-02, ದಿನಾಂಕ: 31ನೇ ಜನವರಿ 2002**

**ವಿಷಯ:** ಅನುಪಯುಕ್ತ ವಸ್ತುಗಳನ್ನು ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ:** ಕೃಷಿ ಆಯುಕ್ತರು, ಬೆಂಗಳೂರು ಇವರ ಪತ್ರದ ಸಂಖ್ಯೆ: ಸಾಮಾನ್ಯ: ಜಡವಸ್ತು: ಆಉವ: ವಿಲೇವಾರಿ: 8: 2003-04, ದಿನಾಂಕ: 28.1.2004.

ಈ ಮೂಲಕ ತಿಳಿಸುವುದೇನೆಂದರೆ, ಸಹಾಯಕ ಕೃಷಿ ನಿರ್ದೇಶಕರು, ಕೃಷಿ ಅಭಿವೃದ್ಧಿ ಕೇಂದ್ರ, ತ್ಯಾವಣಿಗಿ, ದಾವಣಗೆರೆ ಜಿಲ್ಲೆ ಕಛೇರಿಯ ಅನುಪಯುಕ್ತ ವಸ್ತುಗಳನ್ನು ಹರಾಜು ಮಾಡಲು ಉಲ್ಲೇಖ ಪತ್ರದಲ್ಲಿ ಆದೇಶಿಸಿರುತ್ತಾರೆ. ಆದ್ದರಿಂದ ಈ ಕೆಳಕಂಡ ಅನುಪಯುಕ್ತ ವಸ್ತುಗಳನ್ನು ಸಹಾಯಕ ಕೃಷಿ ನಿರ್ದೇಶಕರು : ಕೃಷಿ ಅಭಿವೃದ್ಧಿ ಕೇಂದ್ರ, ತ್ಯಾವಣಿಗಿ ಇವರ ಕಛೇರಿಯ ಆವರಣದಲ್ಲಿ ದಿನಾಂಕ: 8.3.2004 ರಂದು ಅಪರಾಹ್ನ 3.00 ಗಂಟೆಗೆ ಹರಾಜು ಮಾಡಲಾಗುವುದು. ಆಸಕ್ತಿ ಉಳ್ಳವರು ಹರಾಜಿನಲ್ಲಿ ಭಾಗವಹಿಸಬಹುದೆಂದು ಈ ಮೂಲಕ ಸಾರ್ವಜನಿಕರ ಗಮನಕ್ಕೆ ತರಲಾಗಿದೆ.

| ಕ್ರ. ಸಂ. | ದಾಸ್ತಾನಿನ ಹೆಸರು | ದಾಸ್ತಾನು ಪುಟದ ಸಂಖ್ಯೆ | ಪ್ರಮಾಣ | ಮೌಲ್ಯ ರೂ. ಪೈ. |
|---|---|---|---|---|
| 1 | ಖಾಲಿ ಡ್ರಮ್ | 12 | 1 | 183-75 |
| 2 | ಗೋದ್ರೇಜ್ ಟೈಪಿಸ್ಟ್ ಛೇರ್ | 34 | 1 | 120-54 |
| 3 | ಸ್ಟೀಲ್ ಕಪ್ | 40 | 18 | 27-50<br>79-80 |
| 4 | ಖಾಲಿ ಚೀಲಗಳು | 42 | 7 | 42-00 |
| 5 | ಸಲಿಕೆ | 2 | 8 | 318-00<br>190-80 |
| 6 | ಟ್ರೈಸ್ಕಯರ್ | 35 | 1 | 16-50 |
| 7 | ಹ್ಯಾಂಡಿಂಗ್ ಟ್ರೈಸ್ಕಯರ್ | 35 | 1 | 15-50 |
| 8 | ಸ್ಕ್ರೂ ಡ್ರೈವರ್ | 35 | 1 | 23-30 |
| 9 | ಕೈ ಗರಗಸ | 35 | 1 | 32-50 |
| 10 | ಫುಟ್‌ರೋಲ್ | 35 | 1 | 9-50 |
| 11 | ಸುತ್ತಿಗೆ | 35 | 1 | 17-50 |
| 12 | ಕಟಿಂಗ್ ಪ್ಲೇಯರ್ | 35 | 1 | 19-00 |
| 13 | ಉದ್ದುಗೊಲ್ಲು | 35 | 1 | 66-00 |
| 14 | ಟ್ಯಾಕ್ ಪೆರಿನ್ ಬ್ಲೇಡ್ | 35 | 1 | 12-50 |
| 15 | ಜಂಕ್ಷನ್ ಬ್ಲೇಡ್ | 35 | 1 | 9-00 |
| 16 | ಹ್ಯಾಮರ್ | 35 | 1 | 14-50 |
| 17 | ಕೊಡಲಿ | 39 | 1 | 10-50 |
| 18 | ಲಾಕ್ | 42 | 1 | 16-50 |
| 19 | ಕಾರ್ಪೆಂಟರ್ ಕ್ಲಾಂಪ್ | 42 | 1 | 137-50 |
| 20 | ಕಬ್ಬಿಣದ ನೇಗಿಲು | 46 | 2 | 505-00<br>505-00 |
| 21 | ಪವರ್ ಟಿಲ್ಲರ್ ನಂ. 1<br>ಇಂಜಿನ್ ನಂ. 75-0378<br>ಚಾಸ್ಸಿ ನಂ. 75-04190 | 30 | 1 | 15,230-34 |
| 22 | ಪವರ್ ಟಿಲ್ಲರ್ ನಂ. 2<br>ಇಂಜಿನ್ ನಂ. 74-02658<br>ಚಾಸ್ಸಿ ನಂ. 74-03116 | 34 | 1 | 15,230-34 |
| 23 | ಪವರ್ ಟಿಲ್ಲರ್ ನಂ. 3<br>ಇಂಜಿನ್ ನಂ. ಬಿ75-04563<br>ಚಾಸ್ಸಿ ನಂ. ಬಿ75-07929 | 38 | 1 | 17,000-00 |
| 24 | ಟೈರ್ ವೀಲ್ ಸ್ಕಿಡ್ ಪ್ಲೇಟ್ | 38 | 1 | 80-62 |
| 25 | ಜಾಕ್ ವೀಲ್ ಚೇಂಜರ್ | 38 | 1 | 30-10 |
| 26 | ಪವರ್ ಟಿಲ್ಲರ್ ಕೇಜ್‌ವೀಲ್ 2 ಸೆಟ್ | 55 | 2 | 900-00<br>840-00 |

| ಕ್ರ. ಸಂ. | ದಾಸ್ತಾನಿನ ಹೆಸರು | ದಾಸ್ತಾನು ಪುಟದ ಸಂಖ್ಯೆ | ಪ್ರಮಾಣ | ಮೌಲ್ಯ ರೂ. ಪೈ. |
|---|---|---|---|---|
| 27 | ಪವರ್ ಟಿಲ್ಲರ್ ಟ್ರೈಲರ್ | 60 | 2 | 14,850-00<br>14,850-00 |
| 28 | ಟ್ರ್ಯಾಕ್ಟರ್ ಕೇಜ್‌ವೀಲ್ | 46 | 1 | 4,900-00 |
| 29 | ರೋಟರಿ ಯೂನಿಟ್ ಆಫ್ ಪವರ್ ಟಿಲ್ಲರ್ | 46 | 1 | 913-75 |
| 30 | ಎಂ.ಬಿ. ಪ್ಲೋರ್ ವಿತ್ ರಾಕೇಟ್ | 48 | 1 | |
| 31 | ರಿಡ್ಜರ್ | 48 | 1 | 338-62 |
| 32 | ಟೈರ್ ವೀಲ್ ಸ್ಕಿಡ್ | 48 | 1 | 80-62 |
| 33 | ಸೆವೆನ್ ಟೈಮ್ ಕಲ್ಟಿವೇಟರ್ | 48 | 1 | 678-53 |
| 34 | ಟೂಲ್ ಕಿಟ್ಸ್ ಆಫ್ ಪವರ್ ಟಿಲ್ಲರ್ | | | 120-00 |
| | 1) ವೀಲ್ ಚೇಂಜರ್ ಚಾಟ್ | 52 | 1 | |
| | 2) ಸ್ಪಾನರ್ ಸೈಜ್ 19-22 | 52 | 1 | |
| | 3) ಸ್ಪಾನರ್ ಸೈಜ್ 14-17 | 52 | 1 | |
| | 4) ಸ್ಪಾನರ್ ಸೈಜ್ 12-16 | 52 | 1 | |
| | 5) ಸ್ಪಾನರ್ ಸೈಜ್ 12-13 | 52 | 1 | |
| | 6) ಸ್ಪಾನರ್ ಸೈಜ್ 10-12 | 52 | 1 | |
| | 7) ರಿಂಗ್ಸ್ ಸ್ಪಾನರ್ 14-17 | 52 | 1 | |
| | 8) ವೀಲ್ ಸ್ಪಾನರ್ 17-22 | 52 | 1 | |
| 35 | ಟಾರ್ಪಲಿನ್ | 61 | 2 | 6,300-00 |
| | | | ಒಟ್ಟು ಮೊತ್ತ ರೂ. | 94,715-61 |

(ರೂ. ತೊಂಭತ್ನಾಲ್ಕು ಸಾವಿರದ ಏಳು ನೂರಾ ಹದಿನೈದು ಅರವತ್ತೊಂದು ಪೈಸೆ ಮಾತ್ರ)

**ಷರತ್ತುಗಳು**

1. ಹರಾಜಿನಲ್ಲಿ ಬಿಡ್ಡುದಾರರು ಹರಾಜು ಪ್ರಾರಂಭವಾಗುವ ಮುನ್ನ ಪೂರ್ವಾಹ್ನ 11.00 ಗಂಟೆ ಒಳಗಾಗಿ ರೂ. 5,000.00 ಗಳ ಠೇವಣಿ ಹಣವನ್ನು ಕಛೇರಿಗೆ ಪಾವತಿಸತಕ್ಕದ್ದು.
2. ಠೇವಣಿ ಹಣವನ್ನು ಪಾವತಿಸಿದ ಬಿಡ್‌ದಾರರು ಮಾತ್ರ ಹರಾಜಿನಲ್ಲಿ ಭಾಗವಹಿಸಬಹುದಾಗಿದೆ.
3. ಹರಾಜು ಅಖೈರು ಆದ ಕೂಡಲೇ ಅಂತಿಮ ಬಿಡ್‌ದಾರರು ಬಿಡ್ಡಿನ ಮೊಬಲಗನ್ನು ಸ್ಥಳದಲ್ಲಿಯೇ ಪಾವತಿಸತಕ್ಕದ್ದು. ಹರಾಜು ಮಾಡಿದ ಬಿಡ್ಡು ಹಣಕ್ಕೆ ಸರ್ಕಾರದಿಂದ ಅನ್ವಯವಾಗುವ ಮಾರಾಟ ತೆರಿಗೆ ಮತ್ತು ಸರ್‌ಚಾರ್ಜ್‌ನ್ನು ಪಾವತಿಸತಕ್ಕದ್ದು.
4. ಅನುಪಯುಕ್ತ ವಸ್ತುಗಳನ್ನು ಹರಾಜಿನಲ್ಲಿ ಭಾಗವಹಿಸುವವರು ಕಛೇರಿ ಸಮಯದಲ್ಲಿ ಖುದ್ದಾಗಿ ಪರಿಶೀಲಿಸಬಹುದಾಗಿದೆ.
5. ಅಖೈರು ಬಿಡ್‌ದಾರರಿಗೆ ಅನುಪಯುಕ್ತ ಸಾಮಗ್ರಿಗಳನ್ನು ಕೃಷಿ ಆಯುಕ್ತರು, ಬೆಂಗಳೂರು ಇವರಿಂದ ಹರಾಜು ಮೊಬಲಗನ್ನು ಸ್ಥಿರೀಕರಿಸಿದ ನಂತರ ವಿತರಿಸಲಾಗುವುದು.
6. ಅಂತಿಮ ಬಿಡ್‌ದಾರರು ಅನುಪಯುಕ್ತ ವಸ್ತುಗಳನ್ನು ಕೃಷಿ ಆಯುಕ್ತರು, ಒಪ್ಪಿಗೆ ಪಡೆದ ನಂತರ ಎತ್ತುವಳಿ ಮಾಡಲು ಈ ಕಛೇರಿಯಿಂದ ಪತ್ರದ ಮೂಲಕ ತಿಳಿಸಿದ ಒಂದು ವಾರದೊಳಗಾಗಿ ಎತ್ತುವಳಿ ಮಾಡದೇ ಇದ್ದಲ್ಲಿ ಬಿಡ್‌ದಾರರಿಂದ ಹಣವನ್ನು ಯಾವುದೇ ಕಾರಣ ನೀಡದೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
7. ಹರಾಜನ್ನು ಒಪ್ಪುವುದು, ಬಿಡುವುದು ಮತ್ತು ಹರಾಜನ್ನು ಮುಂದೂಡುವ ಹಾಗೂ ಇತರೆ ಅಧಿಕಾರವನ್ನು ಈ ಕಛೇರಿಯ ಮುಖ್ಯಸ್ಥರು ಅಥವಾ ಅವರಿಂದ ಅಧಿಕಾರ ಪಡೆದ ಅಧಿಕಾರಿಯವರು ಹೊಂದಿರುತ್ತಾರೆ.

ಸಹಾಯಕ ಕೃಷಿ ನಿರ್ದೇಶಕರು,
ಕೃಷಿ ಅಭಿವೃದ್ಧಿ ಕೇಂದ್ರ, ತ್ಯಾವಣಗಿ.

ಪಿ.ಆರ್. 106

**IN THE COURT OF CITY CIVIL JUDGE AT BANGALORE**
**(CCH-11) P & SC. No. 84 / 2003**

**Between:**
1. Mrs Syeda Zakia Alvi wife of Mr. Ghouse Baig aged about 60 years.
2. Mrs. Ayesha Ruhi Daughter of late Ghouse Baig aged about 28 years both residing at C/o. Mr. Syed Akbar, No. 197, First Block, 7th Main, Koramangala Bangalore 560 082 — Petitoners

Vs

None — Respondent

## GAZETTE PUBLICATION

WHEREAS, the First Petitioner is the widow and second Petitioner is the daughter of one Mr. Ghouse Baig who expired on July 30, 1997, has filed an application under section 372 of the Indian Succession Act, 1925 for grant of the Succession Certificate favour of both the petitioners for the schedule Postal Saving Certificates.

The court has fixed 30th day of March 2004 at 11 AM for the hearing of the said application.

Any person/persons having objection for the same may enter appearance and file their objections on that day.

### SCHEDULE
### LIST OF NSCs PURCHASED BY LATE GHOUSE BAIG

| Sl.No. | NSC's number | Face value | Date of Purchase | Maturity value |
|---|---|---|---|---|
| **PURCHASED FROM GULBARGA HEAD POST OFFICE** | | | | |
| 1 | 19BB 296581 | Rs. 500.00 | 1.2.95 | Rs. 1,007.50 |
| 2 | 25CC 890057 | Rs. 1,000.00 | -do- | Rs. 2,015.00 |
| 3 | 25CC 919652 | Rs. 1,000.00 | 24.6.95 | Rs. 2,015.00 |
| 4 | 33AA 989675 | Rs. 100.00 | -do- | Rs. 201.50 |
| 5 | 989676 | Rs. 100.00 | -do- | Rs. 201.50 |
| 6 | 989677 | Rs. 100.00 | -do- | Rs. 201.50 |
| 7 | 989678 | Rs. 100.00 | -do- | Rs. 201.50 |
| | Total | Rs. 2,900.00 | | Rs. 3,843.50 |
| **PURCHASED FROM GULBARGA R S POST OFFICE** | | | | |
| 8 | 09DD 324974 | Rs. 5,000.00 | 13.1.94 | Rs. 10,075.00 |
| 9 | 324975 | Rs. 5,000.00 | -do- | Rs. 10,075.00 |
| 10 | 09DD 324996 | Rs. 5,000.00 | 05.02.94 | Rs. 10,075.00 |
| 11 | 09DD 324997 | Rs. 5,000.00 | 07.02.94 | Rs. 10,075.00 |
| 12 | 09DD 322201 | Rs. 5,000.00 | 08.02.94 | Rs. 10,075.00 |
| 13 | 09DD 325000 | Rs. 5,000.00 | -do- | Rs. 10,075.00 |
| 14 | 21CC 262378 | Rs. 1,000.00 | 06.06.94 | Rs. 2,015.00 |
| 15 | 262379 | Rs. 1,000.00 | -do- | Rs. 2,015.00 |
| 16 | 262380 | Rs. 1,000.00 | -do- | Rs. 2,015.00 |
| 17 | 21CC 262382 | Rs. 1,000.00 | 07.06.94 | Rs. 2,015.00 |
| 18 | 262383 | Rs. 1,000.00 | -do- | Rs. 2,015.00 |
| 19 | 21CC 262708 | Rs. 1,000.00 | 14.07.94 | Rs. 2,015.00 |
| 20 | 262709 | Rs. 1,000.00 | -do- | Rs. 2,015.00 |
| 21 | 262710 | Rs. 1,000.00 | -do- | Rs. 2,015.00 |
| 22 | 24CC 642388 | Rs. 1,000.00 | 29.08.94 | Rs. 2,015.00 |
| 23 | 642389 | Rs. 1,000.00 | -do- | Rs. 2,015.00 |
| | Total | Rs. 40,000.00 | | Rs. 80,600.00 |
| **PURCHASED FROM BAHAMANIPURA POST OFFICE** | | | | |
| 24 | 18CC 542857 | Rs. 1,000.00 | 16.06.94 | Rs. 2,015.00 |
| 25 | 542858 | Rs. 1,000.00 | -do- | Rs. 2,015.00 |
| 26 | 18CC 542891 | Rs. 1,000.00 | 30.07.94 | Rs. 2,015.00 |
| 27 | 542892 | Rs. 1,000.00 | -do- | Rs. 2,015.00 |
| 28 | 542893 | Rs. 1,000.00 | -do- | Rs. 2,015.00 |
| 29 | 18CC 543114 | Rs. 1,000.00 | 01.09.94 | Rs. 2,015.00 |
| 30 | 543115 | Rs. 1,000.00 | -do- | Rs. 2,015.00 |
| 31 | 543116 | Rs. 1,000.00 | -do- | Rs. 2,015.00 |
| 32 | 03DD 589953 | Rs. 5,000.00 | 06.09.94 | Rs. 10,075.00 |
| 33 | 21CC 262198 | Rs. 1,000.00 | -do- | Rs. 2,015.00 |
| | Total | Rs. 14,000.00 | | Rs. 28,210.00 |
| **33** | **Grand Total** | **Rs. 56,900.00** | | **Rs. 1,12,653.50** |

Given under my hand and seal of the Court this 16th day of February 2004.

**Assistant Registrar**
City Civil Court, Bangalore

PD-21

## ಕಾರ್ಯದರ್ಶಿ ಹಾಗೂ ನಿಯಂತ್ರಕರು, ಇಲಾಖಾ ಪರೀಕ್ಷೆಗಳು, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು

### ತಿದ್ದುಪಡಿ

### ನಂ. ಇಪ(2)7145:2003-04/ಪಿಎಸ್‌ಸಿ, ದಿನಾಂಕ: 20ನೇ ಫೆಬ್ರವರಿ 2004

2003ರ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶಗಳನ್ನು ಪ್ರಕಟಿಸಿರುವ ಈ ಕಛೇರಿಯ ಅಧಿಸೂಚನೆ ಸಂಖ್ಯೆ: ಇ.ಪ.(1)950/2003-04/ಪಿಎಸ್‌ಸಿ ದಿನಾಂಕ: 28.10.2003 ನ್ನು ದಿನಾಂಕ: 13.11.2003 ರ ಕರ್ನಾಟಕ ರಾಜ್ಯಪತ್ರದ ಭಾಗ-5 ರಲ್ಲಿ ಪ್ರಕಟಿಸಲಾಗಿದ್ದು ಸದರಿ ಪರೀಕ್ಷೆಗಳಿಗೆ ಸಂಬಂಧಿಸಿದಂತೆ ಅಂಕಗಳ ಮರು ಎಣಿಕೆಗಾಗಿ ಕೆಲವೊಂದು ಅಭ್ಯರ್ಥಿಗಳಿಂದ ಬಂದಿದ್ದ ಕೋರಿಕೆಯಂತೆ ಮರುಎಣಿಕೆಯ ನಂತರ ಗಳಿಸಿದ್ದ ಅಂಕಗಳಲ್ಲಿ ಕಂಡು ಬಂದ ಬದಲಾವಣೆಗನುಸಾರವಾಗಿ ಕೆಳಕಂಡ ಫಲಿತಾಂಶವನ್ನು ಸದರಿ ಅಧಿಸೂಚನೆಗೆ ಸೇರಿಸಿ ಓದಿಕೊಳ್ಳತಕ್ಕದ್ದು.

**ಪರಿಶಿಷ್ಟ 'ಎ'**

| ಕ್ರ.ಸಂ. | ಕೇಂದ್ರ | ನೋಂದಣಿ ಸಂಖ್ಯೆ | ವಿಷಯ | ತೇರ್ಗಡೆ ದರ್ಜೆ |
|---|---|---|---|---|
| 1 | ಬೆಂಗಳೂರು | 10326 | ಅಕೌಂಟ್ಸ್ ಹೈಯರ್ | ಸಾಮಾನ್ಯ |
| 2 | ಬೆಂಗಳೂರು | 13692 | ಅಕೌಂಟ್ಸ್ ಹೈಯರ್ | ಸಾಮಾನ್ಯ |
| 3 | ಬೆಂಗಳೂರು | 13815 | ಜನರಲ್ ಲಾ ಭಾಗ-1 | ಸಾಮಾನ್ಯ |
| 4 | ಬೆಳಗಾವಿ | 15089 | ಎಸ್.ಎ.ಎಸ್. ಭಾಗ-2 | ಸಾಮಾನ್ಯ |
| 5 | ಮಂಡ್ಯ | 30355 | ಅಕೌಂಟ್ಸ್ ಹೈಯರ್ | ಸಾಮಾನ್ಯ |
| 6 | ಮೈಸೂರು | 33608 | ಎಸ್.ಎ.ಎಸ್. ಭಾಗ-3 | ಸಾಮಾನ್ಯ |
| 7 | ಹಾವೇರಿ | 42414 | ಅಕೌಂಟ್ಸ್ ಹೈಯರ್ | ಸಾಮಾನ್ಯ |

ಕಾರ್ಯದರ್ಶಿ ಹಾಗೂ ನಿಯಂತ್ರಕರು
ಇಲಾಖಾ ಪರೀಕ್ಷೆಗಳು
ಕರ್ನಾಟಕ ಲೋಕಸೇವಾ ಆಯೋಗ.

ಪಿ.ಆರ್. 109

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ದಾವಣಗೆರೆ ವಿಭಾಗ, ದಾವಣಗೆರೆ

### ಸಂಕ್ಷಿಪ್ತ ಟೆಂಡರ್ ಪ್ರಕಟಣೆ

### ಸಂಖ್ಯೆ: ಎ3-ಮೃ-ಅ.ಸ.-ಟೆಂ-ಸಿ.ಆರ್-8/2004-05, ದಿನಾಂಕ: 25ನೇ ಜನವರಿ 2004

ದಾವಣಗೆರೆ ವಿಭಾಗದ ವ್ಯಾಪ್ತಿಯಲ್ಲಿರುವ ಇಂದಿರಾ ಪ್ರಿಯದರ್ಶಿನಿ ಕಿರು ಮೃಗಾಲಯ, ಅನಗೋಡು ಇಲ್ಲಿನ ಪ್ರಾಣಿ-ಪಕ್ಷಿಗಳಿಗೆ **2004-05**ನೇ ಸಾಲಿಗೆ ಈ ಕೆಳಗಿನ ಅನುಸೂಚಿಯಲ್ಲಿ ನಮೂದಿಸಲ್ಪಟ್ಟಿರುವ ಅಂದಾಜು ಪ್ರಮಾಣದ ಉತ್ತಮ ಗುಣಮಟ್ಟದ ಆಹಾರ ಪದಾರ್ಥಗಳನ್ನು ಪ್ರತಿ ದಿನದ ಅಗತ್ಯಕ್ಕೆ ಅನುಗುಣವಾಗಿ ಒದಗಿಸಲು ಈ ವಿಭಾಗದ ನೋಂದಾಯಿತ ಅರಣ್ಯ ಗುತ್ತಿಗೆದಾರರಿಂದ ಮೊಹರಾದ ಲಕೋಟೆಗಳಲ್ಲಿ ಟೆಂಡರ್‌ಗಳನ್ನು ದಿನಾಂಕ: **15.3.2004** ರಂದು ಅಪರಾಹ್ನ **4.30** ಗಂಟೆ ಯವರೆಗೆ ಸ್ವೀಕರಿಸಿ ಅದೇ ದಿನ 5 ಗಂಟೆಯ ನಂತರ ತೆರೆಯಲಾಗುವುದು. ಟೆಂಡರಿನ ಜೊತೆ ಮುಂಗಡ ಠೇವಣಿ ಬಾಬ್ತು **ರೂ. 2,000/-** ಬ್ಯಾಂಕ್ ಡಿ.ಡಿ. ಅಥವಾ ಪೇ ಆರ್ಡರ್ ಲಗತ್ತಿಸಿರಬೇಕು. ಆದಾಯ ತೆರಿಗೆ ಚುಕ್ತಾ ಮಾಡಿದ ದೃಢೀಕರಣ ಪತ್ರ ಲಗತ್ತಿಸಬೇಕು.

| ಕ್ರ.ಸಂ. | ಮೃಗಾಲಯದ ಹೆಸರು ಮತ್ತು ಸ್ಥಳ | ಪ್ರತಿ ತಿಂಗಳಿಗೆ ಸರಬರಾಜು ಮಾಡಬೇಕಾದ ಆಹಾರ (ಕೆ.ಜಿ. ಗಳಲ್ಲಿ) | |
|---|---|---|---|
| 1 | ಇಂದಿರಾ ಪ್ರಿಯದರ್ಶಿನಿ ಕಿರು ಮೃಗಾಲಯ, ಅನಗೋಡು | 1) ಹುರುಳಿ ನುಚ್ಚು | ತಲಾ 690 ಕೆ.ಜಿ. |
| | | 2) ಕಡ್ಲೆ ಬೂಸ | |
| | | 3) ಸೂರ್ಯಕಾಂತಿ ಹಿಂಡಿ | |
| | | 4) ಅಕ್ಕಿ | 34.5 ಕೆ.ಜಿ |
| | | 5) ಭತ್ತ | 34.8 ಕೆ.ಜಿ |
| | | 6) ಜೋಳ | 34.8 ಕೆ.ಜಿ |
| | | 7) ರಾಗಿ | 34.8 ಕೆ.ಜಿ |
| | | 8) ಹುರಿಕಡಲೆ | 4.3 ಕೆ.ಜಿ |
| | | 9) ಹೆಸರುಕಾಳು | 4.3 ಕೆ.ಜಿ |
| | | 10) ಕಡ್ಲೆಕಾಳು | 4.05 ಕೆ.ಜಿ |
| | | 11) ನವಣೆ | 7.05 ಕೆ.ಜಿ |
| | | 12) ತರಕಾರಿಗಳು | 237 ಕೆ.ಜಿ |
| | | 13) ಹಾಲು | |

**ನಿಬಂಧನೆಗಳು:**

1. ದಿನಾಂಕ: 15.3.2004 ರ ಮಧ್ಯಾಹ್ನ 1.00 ಗಂಟೆಯ ತನಕ ಟೆಂಡರ್ ಫಾರಂಗಳನ್ನು ಈ ಕಛೇರಿಯಲ್ಲಿ ವಿತರಿಸಲಾಗುವುದು. ಪ್ರತಿ ಟೆಂಡರ್ ಫಾರಂ ಬಾಬ್ತು ಶುಲ್ಕ ರೂ. 200/- ಗಳನ್ನು ಮತ್ತು ಇತರೆ ತೆರಿಗೆಯನ್ನು ಸಲ್ಲಿಸಿ ಪಡೆಯಬಹುದು.

2. ಟೆಂಡರ್ ಪ್ರಕಟಣೆಯಲ್ಲಿ ಸೂಚಿಸಿದಂತೆ ಟೆಂಡರ್‌ನಲ್ಲಿ ಭಾಗವಹಿಸುವವರು ರೂ. 2000/- ಗಳ ಬ್ಯಾಂಕ್ ಡಿ.ಡಿ. ಅಥವಾ ಪೇ ಆರ್ಡರ್‌ಗಳನ್ನು ಇ.ಎಂ.ಡಿ. ಯಾಗಿ ಸಲ್ಲಿಸಬೇಕು.
3. ಆದಾಯ ತೆರಿಗೆ ಮತ್ತು ವೃತ್ತಿ ತೆರಿಗೆಯ ತೀರುವಳಿ ದೃಢೀಕರಣವನ್ನು ಸಲ್ಲಿಸಬೇಕು.
4. ಅದೇ ದಿನ 4.30 ಗಂಟೆಗೆ ಸರಿಯಾಗಿ ಟೆಂಡರ್ ಪೆಟ್ಟಿಗೆಯನ್ನು ಮುಚ್ಚಿ ಸೀಲ್ ಮಾಡಲಾಗುವುದು. ಅದೇ ದಿವಸದಂದು 3.00 ಗಂಟೆಗೆ ಎಲ್ಲಾ ಬಿಡ್ದುದಾರರ ಮುಂದೆ ಟೆಂಡರ್‌ನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಅಥವಾ ಅವರಿಂದ ಅಧಿಕೃತವಾಗಿ ನೇಮಕಗೊಂಡ ಅಧಿಕಾರಿಗಳು ತೆರೆಯುವರು.
5. ಗುತ್ತಿಗೆ ಅವಧಿ 31.3.2005 ರವರೆಗೆ ಇರುತ್ತದೆ.
6. ಹೆಚ್ಚಿನ ವಿವರಗಳಿಗೆ ಈ ಕಛೇರಿಯಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದಾಗಿದೆ.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ದಾವಣಗೆರೆ ವಿಭಾಗ, ದಾವಣಗೆರೆ.

ಪಿ.ಆರ್. 112

## ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ

## ಕಡವು ನಿರೀಕ್ಷಕರು, ಶಿವಮೊಗ್ಗ ವಲಯ, ದ್ವಾರಕನಾಥ ಕಲಾಮಂದಿರ ಕಟ್ಟಡ, ಸಾಗರ

## ಕಡವು ನಡೆಸುವ ಹಕ್ಕಿನ ಹರಾಜು ಪ್ರಕಟಣೆ

**ಸಂಖ್ಯೆ: ಒಜಸಾ:ಒಪಿಎ:ಕ್ರ.ಸಂ: 16:2003-04, ದಿನಾಂಕ: 12ನೇ ಫೆಬ್ರವರಿ 2004**

ಈ ಮೂಲಕ ಸಾರ್ವಜನಿಕರಲ್ಲಿ ತಿಳಿಯಪಡಿಸುವುದೇನೆಂದರೆ, ಈ ಕೆಳಗೆ ನಮೂದಿಸಿದ ಕಡವುಗಳನ್ನು 2004-05ನೇ ಸಾಲಿಗೆ ತಮ್ಮ ಸ್ವಂತ ನಾವೆಯನ್ನು ಇಟ್ಟುಕೊಂಡು ಕಡವು ನಡೆಸುವ ಹಕ್ಕನ್ನು ಕೆಳಗೆ ನಮೂದಿಸಿದ ದಿನಾಂಕ: ಸಮಯ ಹಾಗೂ ಸ್ಥಳದಲ್ಲಿ ಬಹಿರಂಗ ಹರಾಜು ನಡೆಸಲಾಗುವುದು. ಈ ಹರಾಜಿನಲ್ಲಿ ಭಾಗವಹಿಸಲು ಇಚ್ಚಿಸುವವರು, ಕೆಳಗೆ ಕಾಣಿಸಿದ ಸ್ಥಳದಲ್ಲಿ ಶರತ್ತುಗಳಿಗೆ ಒಳಪಟ್ಟಿರತಕ್ಕದ್ದು.

| ಕ್ರ. ಸಂ. | ಕಡವಿನ ಹೆಸರು | ತಾಲ್ಲೂಕು ಜಿಲ್ಲೆ | ಲಿಲಾವು ಮಾರಾಟದ ಸ್ಥಳ, ದಿನಾಂಕ, ವೇಳೆ | ಕಡವಿನ ಗುತ್ತಿಗೆ ಅವಧಿ | ಕಡವಿನಲ್ಲಿ ಪ್ರಯಾಣಿಕರಿಂದ ಆಕರಿಸುವ ಹಾಸಲು ದರ | ಲಿಲಾವು ಸಮಯದಲ್ಲಿ ಇಡಬೇಕಾದ ಭದ್ರತಾ ಠೇವಣಿ | ಪ್ರಾರಂಭಿಕ ಸರ್ಕಾರಿ ಸವಾಲು ಮೊತ್ತ |
|---|---|---|---|---|---|---|---|
| 1 | ಮಂಡಗದ್ದೆ-ಮುತ್ತಿನ ಕೊಪ್ಪ | ತೀರ್ಥಹಳ್ಳಿ ಶಿವಮೊಗ್ಗ ಜಿಲ್ಲೆ | ಕಡವು ನಿರೀಕ್ಷಕರ ಕಛೇರಿ ದ್ವಾರಕನಾಥ ಕಲಾ ಮಂದಿರ ಕಟ್ಟಡ, ಸಾಗರ ದಿ: 5.3.2004 ರ ಪೂರ್ವಾಹ್ನ 11 ಗಂಟೆಗೆ | 1.5.2004 ರಿಂದ 31.3.2005 ರವರೆಗೆ | 1-00 | 100-00 | 4875-00 |
| 2 | ತೂದೂರು ಮಂಡವಳ್ಳಿ | | ಕಡವು ನಿರೀಕ್ಷಕರ ಕಛೇರಿ ದ್ವಾರಕನಾಥ ಕಲಾ ಮಂದಿರ ಸಾಗರ ದಿ: 5.3.2004 ಮಧ್ಯಾಹ್ನ 12 ಗಂಟೆಗೆ | 1.4.2004 ರಿಂದ 31.3.2005 ರವರೆಗೆ | 1-00 | 100-00 | 550-00 |

### ಕಡವು ಹರಾಜಿನ ಷರತ್ತುಗಳು

1. ಕಡವಿನ ಸೇವೆಗೆ ಬಳಸುವ ನಾವೆಯ ಸಾಮರ್ಥ್ಯಕ್ಕನುಗುಣವಾಗಿ ಪ್ರಯಾಣಿಕರ ಜೀವವಿಮೆ ಮಾಡಿಸತಕ್ಕದ್ದು.
2. ಕಡವಿಗೆ ಇಲಾಖೆಯಿಂದ ನಾವೆ ಒದಗಿಸಿದಲ್ಲಿ ಇಲಾಖಾ ನಾವೆ ಬಾಡಿಗೆ ಪ್ರತಿ ದಿನಕ್ಕೆ ರೂ. 20.00 ರಂತೆ ಇಲಾಖೆಗೆ ಗುತ್ತಿಗೆದಾರರು ಸಂದಾಯ ಮಾಡಬೇಕಾಗುತ್ತದೆ. ಅಲ್ಲದೇ ಇಲಾಖಾ ನಾವೆಯ ಭದ್ರತೆ ಬಗ್ಗೆ ರೂ. 50,000.00 ಬ್ಯಾಂಕ್ ಗ್ಯಾರಂಟಿಯನ್ನು ಗುತ್ತಿಗೆ ಅವಧಿ ಮುಗಿಯುವವರೆಗೆ ಕೊಡತಕ್ಕದ್ದು.
3. ಕಡವು ಹರಾಜಿನಲ್ಲಿ ಭಾಗವಹಿಸಲು ಇಚ್ಚಿಸುವ ಸ್ಪರ್ಧಿಗಳು ಹರಾಜು ನಡೆಸುವ ಅಧಿಕಾರಿಯವರೊಡನೆ ಹರಾಜು ಪ್ರಾರಂಭಿಸುವ ಮೊದಲು ಪ್ರಕಟಣೆಯಲ್ಲಿ ತಿಳಿಸಿರುವ ಹಣವನ್ನು ಠೇವಣಿಯಾಗಿ ಇಡತಕ್ಕದ್ದು.
4. ಹರಾಜಿನಲ್ಲಿ ಗೆದ್ದವರ ಠೇವಣಿಯನ್ನು ಅವರಿಂದ ಪಾವತಿಸಲು ಇರುವ ಸವಾಲು ಮೊತ್ತದ ಹಣಕ್ಕೆ ವಜಾ ಮಾಡಲಾಗುವುದು. ಉಳಿದವರಿಗೆ ಹರಾಜು ಮುಗಿದ ಕೂಡಲೇ ಹಣ ವಾಪಸ್ಸು ಮಾಡಲಾಗುವುದು.
5. ಬಹಿರಂಗ ಹರಾಜಿನಲ್ಲಿ ಭಾಗವಹಿಸಿ ಯಶಸ್ವಿಯಾದ ಗರಿಷ್ಠ ಮೊತ್ತದ ಸವಾಲುದಾರನು ಸಂಪೂರ್ಣ ಹಣವನ್ನು ಏಕ ಗಂಟಿನಲ್ಲಿ ಕೂಡಲೇ ಪಾವತಿ ಮಾಡಲು ಸಮರ್ಥರಿರಬೇಕು.
6. ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖಾ ನಿರ್ದೇಶಕರ ವಿವೇಚನೆಗೊಳಪಟ್ಟು ಕಂತುಗಳನ್ನು ನೀಡಿದ್ದಲ್ಲಿ ಸೂಕ್ತ ಬ್ಯಾಂಕ್ ಗ್ಯಾರಂಟಿಯನ್ನು ನೀಡತಕ್ಕದ್ದು.
7. ಬಹಿರಂಗ ಹರಾಜಿನಲ್ಲಿ ಸವಾಲಿನಲ್ಲಿ ಬೇಡಿದ ಗರಿಷ್ಠ ಮೊತ್ತದ ಶೇ. 10 ರಷ್ಟನ್ನು ಕನಿಷ್ಠ ರೂ. 50.00 ನ್ನು ಭದ್ರತಾ ಠೇವಣಿಯಾಗಿ ಪ್ರತ್ಯೇಕವಾಗಿ ಒಂದೇ ಗಂಟಿನಲ್ಲಿ ಲಿಲಾವಿನ ಸ್ಥಳದಲ್ಲಿ ಪಾವತಿ ಮಾಡತಕ್ಕದ್ದು.

8. ಹರಾಜಿನಲ್ಲಿ ಸಮಾಧಾನಕರ ಬೇಡಿಕೆ ಬಂದಲ್ಲಿ ಕಡವು ನಡೆಸುವ ಹಕ್ಕಿನ ಅವಧಿಯನ್ನು ಒಂದು ವರ್ಷದ ಬದಲಿಗೆ ಎರಡು ವರ್ಷಕ್ಕೆ ಸಹ ಲಿಲಾವು ಸ್ಥಳದಲ್ಲಿಯೇ ನಿರ್ಧರಿಸಲಾಗುವುದು.
9. ಇಂತಹ ಸಂದರ್ಭದಲ್ಲಿ ಎರಡು ವರ್ಷದ ಬೇಡಿಕೆಯ ಮೊತ್ತವನ್ನು ಒಂದೇ ಗಂಟಿನಲ್ಲಿ ಅಥವಾ ಸೂಕ್ತ ಬ್ಯಾಂಕ್ ಗ್ಯಾರಂಟಿ ನೀಡಿದ್ದಲ್ಲಿ ಎರಡನೇ ವರ್ಷದ ಹಣವನ್ನು ಪ್ರತ್ಯೇಕ ಕಂತಿನಲ್ಲಿ ತುಂಬಲು ಅವಕಾಶ ನೀಡಲಾಗುವುದು. ಇದು ಬಂದರು ಮತ್ತು ಒಳನಾಡು ಜಲ ಸಾರಿಗೆ ಇಲಾಖಾ ನಿರ್ದೇಶಕರ ವಿವೇಚನೆಗೆ ಒಳಪಟ್ಟಿದೆ.
10. ಹರಾಜಿನಲ್ಲಿ ಗೆದ್ದವರು ಹರಾಜಿನ ಹಣವನ್ನು ತಕ್ಷಣ ಪಾವತಿ ಮಾಡತಕ್ಕದ್ದು. ಅಥವಾ ಬ್ಯಾಂಕ್ ಗ್ಯಾರಂಟಿ ಪತ್ರ ನೀಡತಕ್ಕದ್ದು. ಇದಕ್ಕೆ ತಪ್ಪಿದ್ದಲ್ಲಿ ಅವರು ಕಟ್ಟಿದ ಠೇವಣಿಯನ್ನು ಕಳೆದುಕೊಳ್ಳುವರು ಅಂತಹ ತಪ್ಪಿತಸ್ಥ ಸವಾಲುಗಾರರು ಪುನಃ ಸವಾಲಿನಲ್ಲಿ ಭಾಗವಹಿಸುವ ಹಕ್ಕನ್ನು ಕಳೆದುಕೊಳ್ಳುತ್ತಾನೆ.
11. ಹರಾಜಿನಲ್ಲಿ ಗೆದ್ದವರು ರೂ. 15.00 ಸ್ಟ್ಯಾಂಪ್ ಕಾಗದದ ಮೇಲೆ ಅವರ ಖರ್ಚಿನಲ್ಲೇ ಕರಾರು ಪತ್ರವನ್ನು ಬರೆದುಕೊಟ್ಟ ನಂತರ ಕಡವನ್ನು ವಹಿಸಿಕೊಡಲಾಗುವುದು ಅಥವಾ ಕಡವು ನಡೆಸಲು ಅನುಮತಿ ನೀಡಲಾಗುವುದು.
12. ಕಡವು ಸೇವೆಗೆ ಉಪಯೋಗಿಸುವ ದೋಣಿಗಳನ್ನು ಕಡವು ಸೇವೆಗೆ ತೊಡಗಿಸುವ ಮೊದಲು ಕಡವು ನಿರೀಕ್ಷಕರ ಅಧಿಕಾರಿಗಳ ತಪಾಸಣೆಗೆ ಒಳಪಡಿಸಿ ಸರ್ಕಾರದ ನಿಯಮಾನುಸಾರ ಲೈಸನ್ಸ್ ಪಡೆಯಬೇಕು.
13. ನಾವೆಗೆ ಅಗತ್ಯವಾದ ಜೀವ ರಕ್ಷಕ ಸಾಮಗ್ರಿಗಳನ್ನು ಒದಗಿಸತಕ್ಕದ್ದು.
14. ಕಡವಿನಲ್ಲಿ ವಸೂಲು ಮಾಡುವ ಹಾಸಲು ದರಗಳ ಸೂಚನಾ ಫಲಕಗಳನ್ನು ಕಡವು ನಡೆಸುವ ಸ್ಥಳದಲ್ಲಿ ಬಹಿರಂಗವಾಗಿ ಪ್ರಕಟಿಸತಕ್ಕದ್ದು.
15. ಕಡವು ಸರ್ಕಾರದ ಕರಾರು ಒಪ್ಪಂದದ ನಿಯಮಗಳಿಗೆ ಅನುಸಾರವಾಗಿ ನಡೆಸತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಹರಾಜಿನಲ್ಲಿ ಗೆದ್ದವರು ಪಡೆದ ಹಕ್ಕನ್ನು ಮತ್ತು ಕಟ್ಟಿದ ಹಣವನ್ನು ಕಳೆದುಕೊಳ್ಳುವರು. ಇದರಿಂದಾಗಿ ಸರ್ಕಾರಕ್ಕೆ ಆಗುವ ನಷ್ಟಕ್ಕೆ ಅವರೇ ಜವಾಬ್ದಾರರಾಗಿರುತ್ತಾರೆ.
16. ಗುತ್ತಿಗೆದಾರರು ಪ್ರತಿ ತಿಂಗಳು ಕಡವಿನಲ್ಲಿ ಸಾಗಿಸಲಾದ ಪ್ರಯಾಣಿಕರ ಸರಕುಗಳ ಅಂಕಿಅಂಶಗಳನ್ನು ತಪ್ಪದೇ ಕಡವು ನಿರೀಕ್ಷಕರಿಗೆ ಒಪ್ಪಿಸತಕ್ಕದ್ದು.
17. ಒಂದು ವೇಳೆ ಮೇಲಿನ ಷರತ್ತುಗಳನ್ನು ಪಾಲಿಸುವಲ್ಲಿ ಸ್ಪರ್ಧಿಗಳು ಅಸಮರ್ಥರಾದಲ್ಲಿ ಲಿಲಾವನ್ನು ಕೂಡಲೇ ರದ್ದುಪಡಿಸಿ, ಪುನಃ ಲಿಲಾವು ಮಾಡಲಾಗುವುದು. ಇದರಿಂದ ಸರ್ಕಾರಕ್ಕೆ ನಷ್ಟವಾದಲ್ಲಿ ಅವರನ್ನೇ ಜವಾಬ್ದಾರರನ್ನಾಗಿ ಮಾಡಲಾಗುವುದು.
18. ಹರಾಜು ಮಾರಾಟವನ್ನು ಖಾಯಂ ಗೊಳಿಸುವ ಅಥವಾ ತಿರಸ್ಕರಿಸುವ ಅಧಿಕಾರವು ಕರ್ನಾಟಕ ರಾಜ್ಯದ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ನಿರ್ದೇಶಕರಿಗೆ ಸೇರಿರುತ್ತದೆ.

**ಎನ್.ಎಂ. ನಾರಾಯಣಸ್ವಾಮಿ**
ಪಿ.ಆರ್. 113 ಕಡವು ನಿರೀಕ್ಷಕರು
ಶಿವಮೊಗ್ಗ ವಲಯ, ಸಾಗರ.

## ಉಪ ನಿರ್ದೇಶಕರು (ತರಬೇತಿ) ರವರ ಕಛೇರಿ,
## ರಾಜ್ಯ ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಹೆಸರುಘಟ್ಟ, ಬೆಂಗಳೂರು-560 088
## ಹರಾಜು ಪ್ರಕಟಣೆ

**ಸಂಖ್ಯೆ: ರಾಜಾಸಂತಕೇಂ:61:ವಾಹನಗಳ ಹರಾಜು/2003-04/1978, ದಿನಾಂಕ: 5/12ನೇ ಫೆಬ್ರವರಿ 2004**

**ವಿಷಯ:** ನಿರುಪಯುಕ್ತ ವಾಹನವನ್ನು ಹರಾಜು ಮಾಡುವ ಬಗ್ಗೆ.

**ಉಲ್ಲೇಖ:** ಸಾರಿಗೆ ಅಧಿಕಾರಿಯವರ ಪತ್ರ ಸಂಖ್ಯೆ: ಆರ್.ಟಿ.ಓ:ಬಿ.ಎನ್.ಜಿ. (ಎನ್) 2003-04, ದಿನಾಂಕ: 25.6.2003.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ರಾಜ್ಯ ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಹೆಸರುಘಟ್ಟ, ಬೆಂಗಳೂರು - 88 ರಲ್ಲಿರುವ ಈ ಕೆಳಕಂಡ ವಾಹನವನ್ನು ದಿನಾಂಕ: 6.4.2004 ರಂದು ಬೆಳಿಗ್ಗೆ 12.00 ಗಂಟೆಗೆ ಕಛೇರಿಯ ಆವರಣದಲ್ಲಿ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು.

ಹರಾಜು ಮಾಡಲು ಉದ್ದೇಶಿಸಿರುವ ನಿರುಪಯುಕ್ತ ವಾಹನದ ವಿವರ.

| ಕ್ರ. ಸಂ. | ವಾಹನ ನೋಂದಣಿ ಸಂಖ್ಯೆ | ಉತ್ಪಾದಕರು | ಉತ್ಪಾದಿಸಿದ ವರ್ಷ | ವಾಹನದ ವಿಧ | ಇಂಧನ ಬಳಕೆ |
|---|---|---|---|---|---|
| 1 | ಎಂ.ವೈ.ಡಿ. 8612 | - | 1967 | ಲಾರಿ | ಡೀಸೆಲ್ |

**ನಿಬಂಧನೆಗಳು:-**

1. ಹರಾಜಿನಲ್ಲಿ ಭಾಗವಹಿಸತಕ್ಕವರು ಹರಾಜಿನ ಮೊದಲು ರೂ. 1000.00 (ಒಂದು ಸಾವಿರ) ಗಳನ್ನು ಠೇವಣಿಯಾಗಿ ಇಡಬೇಕು ಈ ಹಣವನ್ನು ಹರಾಜು ಪೂರೈಸಿದ ನಂತರ ಹಿಂತಿರುಗಿಸಲಾಗುವುದು (ಅಂಗೀಕರಿಸಿದ ಹರಾಜುದಾರರನ್ನು ಹೊರತುಪಡಿಸಿ)
2. ಹರಾಜು ಮಾಡುವ ಅಧಿಕಾರಿಯವರು ಯಾವುದೇ ಕಾರಣವಿಲ್ಲದೆ ಬಿಡ್ಡನ್ನು ಮುನ್ಸೂಚನೆ ಇಲ್ಲದೆ ಹಸ್ತಾಂತರ ಮಾಡಲು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಪಡೆದಿರುತ್ತಾರೆ.
3. ಮೇಲಾಧಿಕಾರಿಯವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಬಹಿರಂಗ ಹರಾಜನ್ನು ನಡೆಸುವರು ಠೇವಣಿಯನ್ನು ತುಂಬಿದ ಹರಾಜುದಾರರು ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅರ್ಹರಿರುತ್ತಾರೆ.
4. ಯಶಸ್ವಿ ಹರಾಜುದಾರರು ಹರಾಜಿನ ಪೂರ್ತಿ ಹಣವನ್ನು ತೆರಿಗೆ ಸಹಿತ ತಕ್ಷಣವೇ ಪಾವತಿ ಮಾಡಿ ರಸೀದಿ ಪಡೆಯತಕ್ಕದ್ದು ತಪ್ಪಿದಲ್ಲಿ ಠೇವಣಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೆ ನಷ್ಟದ ಮೊಬಲಗನ್ನು ಮೊದಲನೇ ಯಶಸ್ವಿ

ಹರಾಜುದಾರರಿಂದಲೇ ರೆವಿನ್ಯೂ ಬಾಕಿ ಎಂದು ಪರಿಗಣಿಸಿ ವಸೂಲು ಮಾಡಲಾಗುವುದು, ಲಾಭವೇನಾದರೂ ಬಂದರೆ ಅದಕ್ಕೆ ಅವರು ಅರ್ಹರಲ್ಲ.

5. ವಾಹನವು ಎಲ್ಲಿದೆಯೋ ಹೇಗಿದೆಯೋ ಹಾಗೆ ಈಗ ಇರುವ ಸ್ಥಳದಲ್ಲಿಯೇ ಹರಾಜು ಮಾಡಲಾಗುವುದು ಯಾವುದೇ ಕಾರಣಕ್ಕೂ ಸ್ಕ್ರ್ಯಾಪ್ (ಬಿಡಿ ಭಾಗ) ವೆಂದು ಪರಿಗಣಿಸಲಾಗುವುದಿಲ್ಲ.
6. ಇಚ್ಛೆಯುಳ್ಳ ಹರಾಜುದಾರರು ಹರಾಜು ಮಾಡಲಿರುವ ನಿರುಪಯುಕ್ತ ವಾಹನವನ್ನು ಯಥಾಸ್ಥಿತಿಯಲ್ಲಿ ಉಪ ನಿರ್ದೇಶಕರು (ತರಬೇತಿ), ರಾಜ್ಯ ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಹೆಸರಘಟ್ಟ, ಬೆಂಗಳೂರು-88 ರವರ ಆವರಣದಲ್ಲಿ ಕಛೇರಿಯ ವೇಳೆಯಲ್ಲಿ ನೋಡಬಹುದು.
7. ಹೆಚ್ಚಿನ ಮಾಹಿತಿಗಾಗಿ ಉಪ ನಿರ್ದೇಶಕರು (ತರಬೇತಿ) ರವರನ್ನು ಸಂಪರ್ಕಿಸಬಹುದು.

ಉಪ ನಿರ್ದೇಶಕರು (ತರಬೇತಿ)
ರಾಜ್ಯ ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ,
ಹೆಸರಘಟ್ಟ, ಬೆಂಗಳೂರು-88

ಪಿ.ಆರ್. 114

## ತೋಟಗಾರಿಕೆ ಇಲಾಖೆ

## ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು-4

## ಕಡಿಮೆ ಅವಧಿಯ ಟೆಂಡರ್ ಪ್ರಕಟಣೆ

**ಸಂ: ತೋಇ:ತೋಸಾಂಬೆ:ಸತೋಅ-3:52:02-03, ದಿನಾಂಕ: 24ನೇ ಫೆಬ್ರವರಿ 2004**

**ವಿಷಯ:** 2003-04ನೇ ಸಾಲಿಗೆ ತೋಟಗಾರಿಕೆ ಇಲಾಖೆಗೆ ಸಮಗ್ರ ತೆಂಗು ಬೇಸಾಯ ಅಭಿವೃದ್ಧಿ ಯೋಜನೆ ಅಡಿ ಪ್ರಾತ್ಯಕ್ಷತೆ ತಾಕುಗಳ ಸ್ಥಾಪನೆ ಕಾರ್ಯಕ್ರಮದಡಿ ಬೇಕಾಗುವ ಪವರ್ ಸ್ಪ್ರೇಯರ್ ಸರಬರಾಜು ಮಾಡಲು ಟೆಂಡರ್ ಕರೆಯುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂ: ಎಸಿಎನ್:ಡಿಸಿಡಿ:1530:2000, ದಿನಾಂಕ: 7.11.2000.

2003-04ನೇ ಸಾಲಿಗೆ ಸಮಗ್ರ ತೆಂಗು ಬೇಸಾಯ ಅಭಿವೃದ್ಧಿ ಯೋಜನೆ ಅಡಿ ಪ್ರಾತ್ಯಕ್ಷತೆ ತಾಕುಗಳ ಸ್ಥಾಪನೆ ಕಾರ್ಯಕ್ರಮದಡಿ ಬೇಕಾಗುವ ಪವರ್ ಸ್ಪ್ರೇಯರ್‌ಗಳನ್ನು ಸರಬರಾಜು ಮಾಡಲು ಸರಬರಾಜುದಾರರು ತಮ್ಮ ಅತೀ ಕಡಿಮೆ ದರಗಳನ್ನು ನಮೂದಿಸಿ ಮೊಹರಾದ ಟೆಂಡರ್ ಲಕೋಟೆಯನ್ನು ಪವರ್ ಸ್ಪ್ರೇಯರ್‌ಗಳ ಟೆಂಡರ್ 2003-04, ಎಂದು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು-4 ರವರಿಗೆ ಕಳುಹಿಸತಕ್ಕದ್ದು. ಮೊಹರಾದ ಲಕೋಟೆಯ ಮೇಲೆ ಪವರ್ ಸ್ಪ್ರೇಯರ್‌ಗಳ ಪೂರೈಕೆಗೆ ಟೆಂಡರ್ 2003-04, ಎಂದು ನಮೂದಿಸತಕ್ಕದ್ದು. ಹೆಚ್ಚಿನ ಮಾಹಿತಿಯನ್ನು ತೋಟಗಾರಿಕೆ ಜಂಟಿ ನಿರ್ದೇಶಕರು, (ತೋಟದ ಬೆಳೆಗಳು), ಲಾಲ್‌ಬಾಗ್, ಬೆಂಗಳೂರು ರವರ ಕಛೇರಿಯಲ್ಲಿ ಬೆಳಿಗ್ಗೆ 10-00 ಗಂಟೆಯಿಂದ ಸಾಯಂಕಾಲ 5-00 ಗಂಟೆಯವರೆಗೆ ಪಡೆಯಬಹುದು (ಭಾನುವಾರ ಮತ್ತು ಇತರೆ ಸರ್ಕಾರಿ ರಜಾ ದಿನಗಳನ್ನು ಹೊರತುಪಡಿಸಿ). ನಿಗದಿತ ಟೆಂಡರ್ ಫಾರಂಗಳನ್ನು ತೋಟಗಾರಿಕೆ ನಿರ್ದೇಶನಾಲಯದಲ್ಲಿ ರೂ. 100.00 (ರೂ. ಒಂದು ನೂರು ಮಾತ್ರ) ಹಣ ನೀಡಿ ದಿನಾಂಕ: 25.2.04 ರಿಂದ 5.3.04 ರವರೆಗೆ ಪಡೆಯಬಹುದಾಗಿದೆ. ನಿಗದಿತ ಟೆಂಡರ್ ಫಾರಂ ಅಲ್ಲದೆ ಇತರೆ ಯಾವುದೇ ರೀತಿಯಲ್ಲಿ ಟೆಂಡರ್ ಸಲ್ಲಿಸಿದ್ದರೆ ತಿರಸ್ಕರಿಸಲಾಗುವುದು.

ಸರಬರಾಜುದಾರರು, ಸರಬರಾಜು ಮಾಡುವ ಪವರ್ ಸ್ಪ್ರೇಯರ್‌ಗಳ ಅತೀ ಕಡಿಮೆ ದರವನ್ನು ಟೆಂಡರ್ ಫಾರಂನಲ್ಲಿ ನಮೂದಿಸಿ ಇದರ ಜೊತೆ ರೂ. 25,000.00 (ರೂ. ಇಪ್ಪತ್ತೈದು ಸಾವಿರ ಮಾತ್ರ) ಭದ್ರತಾ ಠೇವಣಿ ಹಣವನ್ನು ಕ್ರಾಸ್ ಮಾಡಿರುವ ಬ್ಯಾಂಕ್ ಡ್ರಾಫ್ಟ್ ಮೂಲಕ ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ರವರ ಹೆಸರಿನಲ್ಲಿ ಪಡೆದು ದಿನಾಂಕ: 6.3.04 ರಂದು ಮಧ್ಯಾಹ್ನ 4.00 ಗಂಟೆಯ ಒಳಗೆ ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು-4 ಇಲ್ಲಿಗೆ ಕಛೇರಿ ವೇಳೆಯಲ್ಲಿ ಅಂಚೆ ಮುಖಾಂತರ ಅಥವಾ ಮುದ್ದಾಂ ಮುಖಾಂತರ ತಲುಪಿಸಬೇಕು.

ಟೆಂಡರ್‌ಗಳನ್ನು ದಿನಾಂಕ: 6.3.04 ರಂದು 5.00 ಗಂಟೆಗೆ, ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು ಇಲ್ಲಿ ತೆರೆಯಲಾಗುವುದು. ಈ ಪ್ರಕ್ರಿಯೆಯಲ್ಲಿ ಟೆಂಡರ್ ಒಪ್ಪಿಗೆಯಾಗದವರ ಭದ್ರತಾ ಹಣವನ್ನು ಹಿಂತಿರುಗಿಸಲಾಗುವುದು. ಟೆಂಡರ್ ಒಪ್ಪಿಗೆಯಾದವರ ಭದ್ರತಾ ಠೇವಣಿ ಹಣವನ್ನು ಅವರ ಸ್ಪ್ರೇಯರ್‌ಗಳ ಸರಬರಾಜು ಪ್ರಕ್ರಿಯೆ ಪೂರ್ಣವಾದ ನಂತರ, ನಿಗದಿಪಡಿಸಿದ ಪರಿಕರಗಳನ್ನು ಪಡೆದಿರುವ ಬಗ್ಗೆ ದೃಢೀಕರಣವನ್ನು ಸಂಬಂಧಪಟ್ಟ ಅಧಿಕಾರಿಗಳಿಂದ ಖಾತರಿ ಪಡೆದುಕೊಂಡ ಮೇಲೆ ಹಿಂತಿರುಗಿಸಲಾಗುವುದು. ಯಶಸ್ವಿಯಾದ ಟೆಂಡರ್‌ದಾರರ ಹೆಸರುಗಳನ್ನು ಎಲ್ಲಾ ಜಿಲ್ಲಾ ಅನುಷ್ಠಾನಾಧಿಕಾರಿಗಳಿಗೆ ಕಳುಹಿಸಿಕೊಡುವುದರಿಂದ ಅನುಮೋದಿತ ಟೆಂಡರ್‌ದಾರರು ಆಯಾ ಜಿಲ್ಲೆಯ ತೋಟಗಾರಿಕೆ ಉಪ ನಿರ್ದೇಶಕರು, (ಜಿಪಂ), ರವರಿಂದ ಬೇಡಿಕೆಗಳನ್ನು ಪಡೆದು ಸಾಗಾಣಿಕಾ ವೆಚ್ಚವನ್ನು ತಾವೆ ಭರಿಸಿಕೊಂಡು ತೋಟಗಾರಿಕೆ ಉಪ ನಿರ್ದೇಶಕರು (ಜಿಪಂ) ರವರು ಸೂಚಿಸುವ ಸ್ಥಳಕ್ಕೆ ಒಳ್ಳೆಯ ಗುಣಮಟ್ಟದ ಸ್ಪ್ರೇಯರ್‌ಗಳನ್ನು ಸರಬರಾಜು ಮಾಡಬೇಕು. ಕನಿಷ್ಠ ಟೆಂಡರ್ ದರವು ವಾಣಿಜ್ಯ ತೆರಿಗೆ ಹಾಗೂ ಸಾಗಾಣಿಕೆ ವೆಚ್ಚವನ್ನು ಒಳಗೊಂಡಿರಬೇಕು ಹಾಗೂ ಆಯಾ ಕ್ಷೇತ್ರಾಧಿಕಾರಿಗಳ ಸ್ಥಳಗಳಿಗೆ ಕಳುಹಿಸುವುದನ್ನು ಒಳಗೊಂಡಿರತಕ್ಕದ್ದು.

### ಷರತ್ತುಗಳು

1. ಟೆಂಡರ್ ಫಾರಂನ್ನು ಸಂಸ್ಥೆಯ ಮಾಲೀಕರು ಸಲ್ಲಿಸತಕ್ಕದ್ದು. ಇತರೆ ಅಧಿಕಾರಿಯು ಸಲ್ಲಿಸುವುದಾದರೆ, ಮಾಲೀಕರಿಂದ ದೃಢೀಕರಣ ಪತ್ರದ ಮೂಲಪ್ರತಿ ಲಗತ್ತಿಸಬೇಕು.
2. ಸರಬರಾಜು ಮಾಡುವ ಕಂಪನಿ: ಸಂಸ್ಥೆಗಳು ರಿಜಿಸ್ಟರ್: ನೋಂದಾವಣಿ ಆಗಿರಬೇಕು (ಪ್ರತಿ ಲಗತ್ತಿಸಬೇಕು) ಹಾಗೂ ಟೆಂಡರ್ ದಾರರು ಪರಿಕರಗಳಿಗೆ ತಮ್ಮ ಅತೀ ಕಡಿಮೆ ದರವನ್ನು ವಾಣಿಜ್ಯ ತೆರಿಗೆ ಹಾಗೂ ಸಾಗಾಣಿಕೆ ವೆಚ್ಚ ಸೇರಿದಂತೆ ನಮೂದಿಸಬೇಕು.

3. ಟೆಂಡರ್‌ದಾರರು ಕಳೆದ ವರ್ಷದ ಆದಾಯ/ವಾಣಿಜ್ಯ ತೆರಿಗೆ ದಾಖಲಾತಿಗಳನ್ನು ಟೆಂಡರ್ ಸಲ್ಲಿಸುವಾಗ ಒದಗಿಸಬೇಕು. (ಕೆ.ಎಸ್.ಟಿ, ಸಿ.ಎಸ್.ಟಿ ವಿವರಗಳು)
4. ಜಿಲ್ಲೆಯ / ಅಧಿಕಾರಿಗಳಿಂದ ನೀಡಲಾಗುವ ಇಂಡೆಂಟ್ ಪ್ರಕಾರ ಒಳ್ಳೆಯ ಗುಣಮಟ್ಟದ ಸ್ಪ್ರೇಯರ್‌ಗಳನ್ನು ಸ್ಪೆಸಿಫಿಕೇಷನ್ ಪ್ರಕಾರ ಸರಬರಾಜು ಮಾಡತಕ್ಕದ್ದು.
5. ಸರಬರಾಜು ಮಾಡುವ ಪವರ್ ಸ್ಪ್ರೇಯರ್ ಲಗತ್ತಿಸಿರುವ ಅನುಬಂಧದಂತೆ ಗುಣಮಟ್ಟ / ಸ್ಪೆಸಿಫಿಕೇಷನ್ಸ್ ಹೊಂದಿರಬೇಕು.
6. ಟೆಂಡರ್ ಸಲ್ಲಿಸುವವರು ವಿಳಾಸವನ್ನು ಟೆಂಡರ್‌ನಲ್ಲಿ ಸ್ಪಷ್ಟವಾಗಿ ನಮೂದಿಸಿರಬೇಕು.
7. ಸರಬರಾಜುದಾರರು ಪವರ್ ಸ್ಪ್ರೇಯರ್‌ನ ಸ್ವತಃ ಉತ್ಪಾದಕರಾಗಿರಬೇಕು / ದೃಢೀಕೃತ ಡಿಸ್ಟ್ರಿಬ್ಯೂಟರ್‌ಗಳಾಗಿರಬೇಕು. ದೃಢೀಕೃತ ಡಿಸ್ಟ್ರಿಬ್ಯೂಟರ್ ಎಂಬುದಕ್ಕೆ ದೃಢೀಕರಿಸಿದ ದಾಖಲಾತಿಗಳನ್ನು ಲಗತ್ತಿಸಬೇಕು.
8. ಭದ್ರತಾ ಹಣವನ್ನು ಕ್ರಾಸ್ ಮಾಡಿದ ಡ್ರಾಫ್ಟ್ ರೂಪದಲ್ಲಿ ಮಾತ್ರ ಸಲ್ಲಿಸಬೇಕು. ಚೆಕ್ ಅಥವಾ ರಾಷ್ಟ್ರೀಯ ಉಳಿತಾಯ ಪತ್ರಗಳ ಮೂಲಕ ಸಲ್ಲಿಸಿದ್ದಲ್ಲಿ ಸ್ವೀಕರಿಸಲಾಗುವುದಿಲ್ಲ.
9. ಸ್ಪ್ರೇಯರ್‌ಗಳ ಪ್ರಮಾಣವನ್ನು ನಮೂದಿಸಿರುವಷ್ಟು ಒದಗಿಸುವ ಸಾಮರ್ಥ್ಯವುಳ್ಳವರು ಮಾತ್ರ ಟೆಂಡರ್‌ನಲ್ಲಿ ಭಾಗವಹಿಸುವುದು.
10. ಯಶಸ್ವಿಯಾದ ಸರಬರಾಜುದಾರರ ವಿಳಾಸಗಳನ್ನು ರಾಜ್ಯದ ವಿವಿಧ ಜಿಲ್ಲೆಗಳ ತೋಟಗಾರಿಕೆ ಉಪ ನಿರ್ದೇಶಕರು (ಜಿಲ್ಲಾ ಪಂಚಾಯತ್) ಗಳಿಗೆ ಕಳುಹಿಸಿಕೊಡಲಾಗುವುದರಿಂದ ಬೇಡಿಕೆಗಳನ್ನು ಸಂಬಂಧಪಟ್ಟ ಅಧಿಕಾರಿಗಳಿಂದ ಪಡೆದು ಆಯಾ ಜಿಲ್ಲೆಗಳಿಗೆ ಅವರು ಸೂಚಿಸುವ ಸ್ಥಳಗಳಿಗೆ ತಮ್ಮ ಸ್ವಂತ ಖರ್ಚಿನಲ್ಲಿ ಅನುಷ್ಠಾನಾಧಿಕಾರಿಗಳು ತಿಳಿಸಿದ ದಿನಾಂಕದೊಳಗಾಗಿ ಸರಬರಾಜು ಮಾಡಲು ಸಿದ್ದರಿರಬೇಕು.
11. ಯಶಸ್ವಿಯಾದ ಯಾವುದೇ ಟೆಂಡರ್‌ದಾರರಿಗೆ ನಿರ್ದೇಶನಾಲಯದಿಂದ ನೇರವಾಗಿ ಸ್ಪ್ರೇಯರ್‌ಗಳನ್ನು ಸರಬರಾಜು ಮಾಡಲು ಬೇಡಿಕೆ ನೀಡಲಾಗುವುದಿಲ್ಲ. ಬೇಡಿಕೆಗಳನ್ನು ಜಿಲ್ಲಾ ಮಟ್ಟದ ಅಧಿಕಾರಿಗಳು ಮಾತ್ರ ನೀಡುವುದು. ಅನುಮೋದಿತ ಸರಬರಾಜುದಾರರಿಗೆ ಬೇಡಿಕೆಗಳನ್ನು ನೀಡುವುದು ಅಥವಾ ಬಿಡುವುದು ಆಯಾ ಜಿಲ್ಲೆಗಳ ಅನುಷ್ಠಾನಾಧಿಕಾರಿಗಳಿಗೆ ಸಂಬಂಧಿಸಿರುತ್ತದೆ. ಈ ಬಗ್ಗೆ ಯಾವುದೇ ದೂರುಗಳು ಬಂದಲ್ಲಿ ನಿರ್ದೇಶನಾಲಯವು ಸ್ವೀಕರಿಸುವುದಿಲ್ಲ.
12. ನಿರ್ದೇಶನಾಲಯವು ಯಾವುದೇ ಕಾರಣ ನೀಡದೇ ಟೆಂಡರ್ ಅನ್ನು ರದ್ದುಗೊಳಿಸುವ ಹಕ್ಕು ಹೊಂದಿರುತ್ತದೆ.
13. ಟೆಂಡರ್ ಫಾರಂ ಬೆಲೆ ರೂ. 100.00 ಅನ್ನು ನೀಡಿ ನಿರ್ದೇಶನಾಲಯದಿಂದ ಟೆಂಡರ್ ಫಾರಂ ಪಡೆಯತಕ್ಕದ್ದು.
14. ಪವರ್ ಸ್ಪ್ರೇಯರ್‌ಗೆ ಐ.ಎಸ್.ಐ/ಐ.ಎಸ್.ಓ ದೃಢೀಕರಣ ಇರಬೇಕು ಹಾಗೂ ಸಂಬಂಧಪಟ್ಟ ದೃಢೀಕರಣ ಪತ್ರವನ್ನು ಲಗತ್ತಿಸಬೇಕು.
15. ಪವರ್ ಸ್ಪ್ರೇಯರ್ ಗುಣಮಟ್ಟವನ್ನು ಪರೀಕ್ಷಿಸಿ ತೀರ್ಮಾನಿಸುವ ಪೂರ್ಣ ಅಧಿಕಾರ, ಇಲಾಖೆಯ ವ್ಯಾಪ್ತಿಗೆ ಒಳಪಟ್ಟಿರುತ್ತದೆ. ಈ ವಿಷಯದಲ್ಲಿ ಇಲಾಖೆಯ ನಿರ್ಧಾರ ಅಂತಿಮವಾಗಿರುತ್ತದೆ.
16. ನಿರ್ದೇಶನಾಲಯವು ಯಾವುದೇ ಕಾರಣ ನೀಡದೆ, ಟೆಂಡರ್ ಅನ್ನು ಪುರಸ್ಕರಿಸುವ ಅಥವಾ ತಿರಸ್ಕರಿಸುವ ಹಕ್ಕು ಹೊಂದಿರುತ್ತದೆ.
17. ಮೇಲೆ ಹೇಳಿದ ನಿಬಂಧನೆಗಳನ್ನು, ದೃಢೀಕರಿಸುತ್ತಾ, ಸರಬರಾಜುದಾರರು, ಕರಾರು ಒಪ್ಪಿಗೆ ಪತ್ರವನ್ನು ರೂ. 20.00 ಬೆಲೆಯ ಛಾಪಾ ಕಾಗದದ ಮೇಲೆ ಬರೆದು ಸಹಿ ಮಾಡಿಕೊಡಬೇಕು.
18. ಅನುಮೋದಿತ ಟೆಂಡರ್‌ದಾರರು ಸರಬರಾಜು ಮೊತ್ತದ ಶೇಕಡ 5 ರಷ್ಟು ಮೊತ್ತವನ್ನು ಕ್ರಾಸ್ ಮಾಡಿದ ಡಿ.ಡಿ. ರೂಪದಲ್ಲಿ ಮುಂಗಡ ಭದ್ರತಾ ಠೇವಣಿಯನ್ನು, ತೋಟಗಾರಿಕೆ ನಿರ್ದೇಶಕರು ರವರ ಹೆಸರಿನಲ್ಲಿ ನೀಡಬೇಕು.
19. ಟೆಂಡರ್‌ದಾರರು ಮೇಲಿನ ಯಾವುದೇ ಷರತ್ತುಗಳನ್ನು ಪಾಲಿಸದಿದ್ದಲ್ಲಿ ಅವರ ಇ.ಎಂ.ಡಿ. ಮೊತ್ತ ಹಾಗೂ ಮುಂಗಡ ಭದ್ರತಾ ಠೇವಣಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲಾಗುವುದು.
20. ಯಾವುದೇ ಕಾನೂನು ಪರಿಹಾರಗಳಿಗೆ ಬೆಂಗಳೂರು ವ್ಯಾಪ್ತಿಯ ಕೋರ್ಟುಗಳಿಗೆ ಸೀಮಿತವಾಗಿರುತ್ತದೆ.

ತೋಟಗಾರಿಕೆ ನಿರ್ದೇಶಕರು

ಪಿ.ಆರ್. 115 ಲಾಲ್‌ಬಾಗ್, ಬೆಂಗಳೂರು.

**ಔಷಧ ನಿಯಂತ್ರಣ ಇಲಾಖೆ**

**ಅಧೀಕ್ಷಕರ ಕಛೇರಿ, ಔಷಧ ಪರೀಕ್ಷಾ ಪ್ರಯೋಗಾಲಯ, ಅರಮನೆ ರಸ್ತೆ, ಬೆಂಗಳೂರು-560 001**

**ಅಲ್ಪಾವಧಿ ಮರು ಟೆಂಡರ್ ಪ್ರಕಟಣೆ**

**ಸಂಖ್ಯೆ: ಔನಿಇ:ಔಪಪ್ರ:ಟಿಐಎ:2:2003-04, ದಿನಾಂಕ: 20ನೇ ಫೆಬ್ರವರಿ 2004**

ಅಧಿಕೃತ ಉತ್ಪಾದಕರು, ವಿತರಕರಿಂದ 1) ಹೆಚ್.ಪಿ.ಎಲ್.ಸಿ. ಕಾಲಮ್ಸ್, 2) ವಾಟರ್ ಪ್ಯೂರಿಫಿಕೇಷನ್ ಸಿಸ್ಟಮ್, 3) ಪಾರ್ಟಿಕಲ್ ಕೌಂಟರ್, ಮತ್ತು 4) ಅರ್‌ಗಾನ್ ಬಾತ್ ಇವುಗಳನ್ನು ಔಷಧ ಪರೀಕ್ಷಾ ಪ್ರಯೋಗಾಲಯ, ಬೆಂಗಳೂರು ಇಲ್ಲಿಗೆ ಪೂರೈಸಲು ಮೊಹರಾದ ಟೆಂಡರ್‌ನ್ನು ಆಹ್ವಾನಿಸಲಾಗಿದೆ. ಟೆಂಡರ್ ನಮೂನೆ ಶುಲ್ಕ ರೂ. 300.00, ಕೆ.ಎಸ್.ಟಿ. ಶೇ. 8, ಟೆಂಡರ್ ನಮೂನೆಗಳನ್ನು ಮಾರಾಟ ಮಾಡಲು ಕೊನೆಯ ದಿನಾಂಕ: 6.3.2004 ರ 4 ಘಂಟೆಯವರೆಗೆ, ಟೆಂಡರ್ ಸ್ವೀಕರಿಸಲು ಕೊನೆಯ ದಿನಾಂಕ: 8.3.2004ರ 4 ಘಂಟೆಯವರೆಗೆ ಮತ್ತು ತೆರೆಯುವುದು ದಿನಾಂಕ: 9.3.2004ರ 11.00 ಘಂಟೆಗೆ. ದಿನಾಂಕ: 9.3.2004 ರಂದು ರಜೆಯೆಂದು ಘೋಷಿಸಲ್ಪಟ್ಟರೆ, ಮುಂದಿನ ಕೆಲಸದ ದಿನದಂದು ಟೆಂಡರ್ ತೆರೆಯಲಾಗುವುದು. ಟೆಂಡರ್ ಫಾರಂಗಳನ್ನು ದಿನಾಂಕ: 26.2.2004 ರಂದು ಮಾರಾಟ ಮಾಡಲಾಗುವುದು. ಇತರೆ ವಿವರಗಳನ್ನು ಸದರಿ ಕಛೇರಿಯಿಂದ ಪಡೆಯಬಹುದು.

| ಉಪಕರಣದ ಹೆಸರು | ಪರಿಮಾಣ | ಇ.ಎಂ.ಡಿ. |
|---|---|---|
| 1) ಹೆಚ್.ಪಿ.ಎಲ್.ಸಿ. ವಾಟರ್ ಪ್ಯೂರಿಫಿಕೇಷನ್ | 1 ಸಂಖ್ಯೆ | 4,500.00 |
| 2) ಅರ್‌ಗಾನ್‌ಬಾತ್ | 1 ಸಂಖ್ಯೆ | 4,000.00 |
| 3) ಪಾರ್ಟಿಕಲ್ ಕೌಂಟರ್ | 1 ಸಂಖ್ಯೆ | 15,000.00 |
| 4) ಹೆಚ್.ಪಿ.ಎಲ್.ಸಿ. ಕಾಲಮ್ಸ್ | 10 ಸಂಖ್ಯೆ | 3,600.00 |

ಸದಸ್ಯ ಕಾರ್ಯದರ್ಶಿ

ಪಿ.ಆರ್. 116

ಟೆಂಡರ್ ಆಹ್ವಾನ ಪ್ರಾಧಿಕಾರ ಮತ್ತು ಟೆಂಡರ್
ಅಂಗೀಕರಿಸುವ ಪ್ರಾಧಿಕಾರ ಸಮಿತಿ ಮತ್ತು ಫಾರ್ಮಕಾಲಜಿಸ್ಟ್
ಔಷಧ ಪರೀಕ್ಷಾ ಪ್ರಯೋಗಾಲಯ,
ಬೆಂಗಳೂರು-1

**FORM-IV**
**(See Rule 12)**
**NOTICE**

It is hereby notified that the undersigned has changed his/her name from **SANGAPPA FAKIRAPPA HULAGOPPA** to **SANGAPPA FAKIRAPPA KOTI**

PD-32

**SANGAPPA FAKIRAPPA KOTI**

**ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಶಿವಮೊಗ್ಗ ವೃತ್ತ, ಶಿವಮೊಗ್ಗ**

**ಅಧಿಸೂಚನೆ ಪತ್ರ**

**ಕ್ರ.ಸಂ. ಎ1 ಅವಿ ಸಿಆರ್. 248/2003-04, ದಿನಾಂಕ: 7ನೇ ಫೆಬ್ರವರಿ 2004**

ಈ ಮೂಲಕ ಸಾರ್ವಜನಿಕರ ಹಾಗೂ ಅರ್ಹ ಅಭ್ಯರ್ಥಿಗಳ ಗಮನಕ್ಕೆ ತರುವುದೇನೆಂದರೆ, ಶಿವಮೊಗ್ಗ ವೃತ್ತದ ವ್ಯಾಪ್ತಿಯಲ್ಲಿ ಖಾಲಿ ಇರುವ 4 "ಅರಣ್ಯ ವೀಕ್ಷಕರ" ಹುದ್ದೆಗಳಿಗೆ ನೇರ ನೇಮಕಾತಿಗಾಗಿ ಕರ್ನಾಟಕ ಅರಣ್ಯ ಇಲಾಖಾ ಸೇವೆಗಳು (ನೇಮಕಾತಿ) (ತಿದ್ದುಪಡಿ) ನಿಯಮಾವಳಿ 2003 ರಲ್ಲಿನ ನಿಯಮಗಳಿಗೆ ಒಳಪಟ್ಟು ಪುರುಷ ಹಾಗೂ ಮಹಿಳಾ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಅರ್ಜಿ ನಮೂನೆಗಳನ್ನು ಇಲಾಖಾವತಿಯಿಂದ ಮಾರಾಟ ಮಾಡಲಾಗುವುದಿಲ್ಲ. ಅಭ್ಯರ್ಥಿಗಳು ಮಾದರಿ ಅರ್ಜಿ ನಮೂನೆಯನ್ನು ಪ್ರಿಂಟ್ ಅಥವಾ ಕಂಪ್ಯೂಟರ್ ಪ್ರಿಂಟ್ ಮಾದರಿಯಲ್ಲಿ ಮಾತ್ರವೇ ತಯಾರಿಸಿ ಸಲ್ಲಿಸಬೇಕು. ಮತ್ಯಾವುದೇ ರೀತಿಯಲ್ಲಿ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಒಟ್ಟು ಲಭ್ಯವಿರುವ "ಅರಣ್ಯ ವೀಕ್ಷಕ" ರ ಹುದ್ದೆಗಳು: 4 (ನಾಲ್ಕು ಮಾತ್ರ)

(ಪರಿಶಿಷ್ಟ ಜಾತಿ-1, ಪರಿಶಿಷ್ಟ ಪಂಗಡ-1, ಸಾಮಾನ್ಯ ವರ್ಗ-2)

ಕಾಲಿಕ ವೇತನ ಶ್ರೇಣಿ: ರೂ. 2600-50-2700-75-3450-100-4350

**ಎಲ್ಲಾ ವರ್ಗದ ಅಭ್ಯರ್ಥಿಗಳಿಗೆ ಅರ್ಜಿ ಹಾಗೂ ಪ್ರವೇಶ ಶುಲ್ಕ ವಿನಾಯಿತಿ ಇರುತ್ತದೆ.**

**ವಿದ್ಯಾರ್ಹತೆ:** ಏಳನೇ ತರಗತಿಯಲ್ಲಿ ಉತ್ತೀರ್ಣರಾಗಿರಬೇಕು

**ಅಭ್ಯರ್ಥಿಯ ವಯಸ್ಸು:**

1. ಈ ಪ್ರಕಟಣೆಯ ದಿನಾಂಕ: 7.2.2004 ರಂದು 18 ವರ್ಷ ವಯಸ್ಸಾಗಿರಬೇಕು. ಗರಿಷ್ಠ ವಯೋಮಿತಿ ವಿವರ ಈ ಕೆಳಗಿನಂತಿವೆ.
2. ಅಭ್ಯರ್ಥಿಯು ಪರಿಶಿಷ್ಟ ಜಾತಿ / ಪರಿಶಿಷ್ಟ ವರ್ಗ / ಹಿಂದುಳಿದ ವರ್ಗಗಳ ಪ್ರವರ್ಗ 1ಕ್ಕೆ ಸೇರಿದ್ದಲ್ಲಿ ಗರಿಷ್ಟ ವಯೋಮಿತಿ 33 ವರ್ಷಗಳು.
3. ಅಭ್ಯರ್ಥಿಯು ಹಿಂದುಳಿದ ವರ್ಗಗಳ ಪ್ರವರ್ಗ II(ಎ), II(ಬಿ), III(ಎ), III(ಬಿ) ಗಳಿಗೆ ಸೇರಿದ್ದಲ್ಲಿ ಗರಿಷ್ಟ ವಯೋಮಿತಿ 32 ವರ್ಷಗಳು.
4. ಅಭ್ಯರ್ಥಿಯು ಮಿಲಿಟರಿ ಸೇವೆಯಲ್ಲಿದ್ದು ಯಾವುದೇ ಕಾರಣದಿಂದ ಸೇವೆಯಿಂದ ಹೊರಬಂದಿದ್ದಲ್ಲಿ / ನಿವೃತ್ತರಾಗಿದ್ದಲ್ಲಿ ಅಂಥಹ ವ್ಯಕ್ತಿಗೆ ಮಿಲಿಟರಿ ಸೇವೆಯನ್ನು ಸಲ್ಲಿಸಿದ್ದಷ್ಟು ವರ್ಷಗಳ ರಿಯಾಯಿತಿ ಇರುತ್ತದೆ.
5. ಅರಣ್ಯ ಪ್ರೇರಕರಿಗೆ ವಯೋಮಿತಿ: ಅಧಿಸೂಚನೆ ದಿನಾಂಕಕ್ಕೆ ಕನಿಷ್ಠ 5 ವರ್ಷಗಳ ಸೇವೆಯನ್ನು ಅರಣ್ಯ ರಕ್ಷಕರಾಗಿ ಪೂರೈಸಿದ್ದು ಪ್ರಸ್ತುತ ಅರಣ್ಯ ಪ್ರೇರಕನಾಗಿ ಸೇವೆಯಲ್ಲಿ ಮುಂದುವರೆದಿದ್ದಲ್ಲಿ ಕೆಳಗಿನ ಗರಿಷ್ಟ ವಯೋಮಿತಿ ಅನ್ವಯಿಸುವುದು.

| | |
|---|---|
| ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ / ಮತ್ತು ಪ್ರವರ್ಗ-1 | ಗರಿಷ್ಟ ವಯೋಮಿತಿ 43 ವರ್ಷಗಳು |
| II(ಎ), II(ಬಿ), III(ಎ), III(ಬಿ) | ಗರಿಷ್ಟ ವಯೋಮಿತಿ 42 ವರ್ಷಗಳು |
| ಇತರೆ | ಗರಿಷ್ಟ ವಯೋಮಿತಿ 40 ವರ್ಷಗಳು |

**ದೇಹ ದಾರ್ಢ್ಯತೆ:** ಶಾರೀರಿಕ ಮಾನದಂಡ: ಈ ಕೆಳಗಿನ ಕನಿಷ್ಟ ಶಾರೀರಿಕ ಅರ್ಹತೆ ಇರತಕ್ಕದ್ದು.

| ಕ್ರಮಾಂಕ | ವಿವರ | ಎತ್ತರ | ಎದೆ ಸುತ್ತಳತೆ | |
|---|---|---|---|---|
| | | | ಸಾಮಾನ್ಯ ಸ್ಥಿತಿ | ಕನಿಷ್ಟ ಹಿಗ್ಗಿಸುವಿಕೆ |
| 1 | ಪುರುಷರು | 163 ಸೆಂ.ಮೀ. | 79 ಸೆಂ.ಮೀ. | 5 ಸೆಂ.ಮೀ. |
| 2 | ಪುರುಷರು (ಅರಣ್ಯ ಬುಡಕಟ್ಟು ಜನ) | 152 ಸೆಂ.ಮೀ. | 74 ಸೆಂ.ಮೀ. | 5 ಸೆಂ.ಮೀ. |
| 3 | ಮಹಿಳೆಯರು | 150 ಸೆಂ.ಮೀ. | | |
| 4 | ಮಹಿಳೆಯರು (ಅರಣ್ಯ ಬುಡಕಟ್ಟು ಜನ) | 145 ಸೆಂ.ಮೀ. | | |

6. **ವೈದ್ಯಕೀಯ ಪರೀಕ್ಷೆ:**

ಅರ್ಹ ಅಭ್ಯರ್ಥಿಗಳ ವೈದ್ಯಕೀಯ ಪರೀಕ್ಷೆಯನ್ನು ಒಂದು ವೈದ್ಯ ಸಮಿತಿಯು ಪರಿಗಣಿಸುವುದು. ಇದಕ್ಕೆ ಹೊರತಾಗಿ ಯಾವುದೇ ವೈದ್ಯಕೀಯ ಪ್ರಮಾಣ ಪತ್ರದ ಆಧಾರದ ಮೇಲೆ ಅಭ್ಯರ್ಥಿಗಳನ್ನು ಪರಿಗಣಿಸಲಾಗುವುದಿಲ್ಲ.

7. **ದೈಹಿಕ ತಾಳ್ವಿಕೆ ಪರೀಕ್ಷೆ:**

ಪುರುಷರಿಗೆ 1600 ಮೀ ಓಟ 6 ನಿಮಿಷಗಳಲ್ಲಿ

ಮಹಿಳೆಯರಿಗೆ 1000 ಮೀ ಓಟ 5 ನಿಮಿಷಗಳಲ್ಲಿ

8. **ದೈಹಿಕ ಸಾಮರ್ಥ್ಯ ಪರೀಕ್ಷೆ:**

ಈ ಕೆಳಕಂಡ 5 ಅಂಶಗಳ ದೈಹಿಕ ಸಾಮರ್ಥ್ಯ ಪರೀಕ್ಷೆಗಳಲ್ಲಿ ಅಭ್ಯರ್ಥಿಗಳು 3 ಅಂಶಗಳಲ್ಲಿ ಉತ್ತೀರ್ಣರಾಗಲೇಬೇಕು.

| | | | | |
|---|---|---|---|---|
| 1 | ಓಡುವುದು | ಪುರುಷರಿಗೆ | 100ಮೀ ಓಟ | 15 ಸೆಕೆಂಡುಗಳಲ್ಲಿ |
| | ಓಡುವುದು | ಮಹಿಳೆಯರಿಗೆ | 100ಮೀ ಓಟ | 18.5 ಸೆಕೆಂಡುಗಳಲ್ಲಿ |
| 2 | ಎತ್ತರ ಜಿಗಿತ | ಪುರುಷರಿಗೆ | 1.20 ಮೀ | |
| | | ಮಹಿಳೆಯರಿಗೆ | 0.90 ಮೀ | |
| 3 | ಉದ್ದ ಜಿಗಿತ | ಪುರುಷರಿಗೆ | 3.80 ಮೀ | |
| | | ಮಹಿಳೆಯರಿಗೆ | 2.50 ಮೀ | |
| 4 | ಗುಂಡು ಎಸೆತ | ಪುರುಷರಿಗೆ | 5.60 ಮೀ | |
| | | ಮಹಿಳೆಯರಿಗೆ | 3.76 ಮೀ | |
| 5(ಎ) | ಓಡುವುದು | ಪುರುಷರಿಗೆ | 800 ಮೀ | 2.50 ಸೆಕೆಂಡುಗಳಲ್ಲಿ |
| 5(ಬಿ) | | ಮಹಿಳೆಯರಿಗೆ | 200 ಮೀ | 40 ಸೆಕೆಂಡುಗಳಲ್ಲಿ |

9. **ಕನಿಷ್ಟ ತೂಕ:** ಪುರುಷರಿಗೆ 40 ಕೆ.ಜಿ

ಮಹಿಳೆಯರಿಗೆ 38 ಕೆ.ಜಿ

9. **ಲಿಖಿತ ಪರೀಕ್ಷೆ:**

ದೈಹಿಕ ತಾಳ್ವಿಕೆ ಪರೀಕ್ಷೆಯಲ್ಲಿ ಮತ್ತು ದೈಹಿಕ ಸಾಮರ್ಥ್ಯ ಪರೀಕ್ಷೆಗಳಲ್ಲಿ ಉತ್ತೀರ್ಣರಾದ ಅಭ್ಯರ್ಥಿಗಳಿಗೆ ಒಂದು ಗಂಟೆ ಅವಧಿಯ ಲಿಖಿತ ಪರೀಕ್ಷೆಯನ್ನು ಸಾಮಾನ್ಯ ಜ್ಞಾನ ಮತ್ತು ಪ್ರಾಥಮಿಕ ಮಟ್ಟದ ಗಣಿತದ ಬಗ್ಗೆ ಒಟ್ಟು 100 ಅಂಕಗಳಿಗೆ ಲಿಖಿತ ಪರೀಕ್ಷೆ ಇರುತ್ತದೆ.

ಅರ್ಜಿಯನ್ನು ನಿಗದಿತ ನಮೂನೆಯಲ್ಲಿ ಎಲ್ಲಾ ದಾಖಲೆಗಳೊಂದಿಗೆ ದಿನಾಂಕ: 8.3.2004 ರೊಳಗಾಗಿ ಅರಣ್ಯ ಸಂರಕ್ಷಣಾಧಿಕಾರಿಗಳು, ಶಿವಮೊಗ್ಗ ವೃತ್ತ, ಹೊಳೆಹೊನ್ನೂರು ರಸ್ತೆ, ವಿದ್ಯಾನಗರ ಅಂಚೆ, ಶಿವಮೊಗ್ಗ ಇಲ್ಲಿಗೆ ಅಂಚೆ ಮೂಲಕ ಅಥವಾ ಖುದ್ದಾಗಿ ಸಲ್ಲಿಸುವುದು.

ಅರ್ಜಿಯ ಜೊತೆಗೆ ಈ ಕೆಳಕಂಡ ದೃಢೀಕೃತ ದಾಖಲೆಗಳ ಜೆರಾಕ್ಸ್ ಪ್ರತಿಗಳನ್ನು ಲಗತ್ತಿಸಬೇಕು. (ಮೂಲ ಪ್ರತಿಗಳನ್ನು ಲಗತ್ತಿಸಬಾರದು).

1. ಏಳನೇ ತರಗತಿಯಲ್ಲಿ ಪಾಸಾಗಿರುವ ಬಗ್ಗೆ ಶಾಲಾ ವರ್ಗಾವಣೆ ದೃಢೀಕರಣ ಪತ್ರ (ಹುಟ್ಟಿದ ದಿನಾಂಕದ ದಾಖಲೆಗಾಗಿ)
2. ಏಳನೇ ತರಗತಿ ಪಾಸಾದ ಬಗ್ಗೆ ಅಂಕಪಟ್ಟಿ
3. ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ / ಹಿಂದುಳಿದ ವರ್ಗಗಳ ಪ್ರವರ್ಗಗಳಿಗೆ ಸೇರಿದ್ದಲ್ಲಿ ಸಂಬಂಧಿಸಿದ ಅಧಿಕಾರಿಗಳಿಂದ ಪಡೆದ ದಾಖಲಾತಿಯ ದೃಢೀಕೃತ ಜೆರಾಕ್ಸ್ ಪ್ರತಿ.
4. ಮಿಲಿಟರಿ ಸೇವೆ ಸಲ್ಲಿಸಿದ್ದಲ್ಲಿ ಅದಕ್ಕೆ ಸಂಬಂಧಿಸಿದ ದಾಖಲೆಗಳ ದೃಢೀಕೃತ ಜೆರಾಕ್ಸ್ ಪ್ರತಿ.

ಅರಣ್ಯ ಸಂರಕ್ಷಣಾಧಿಕಾರಿ ಮತ್ತು ಆಯ್ಕೆ ಪ್ರಾಧಿಕಾರಿ,

ಶಿವಮೊಗ್ಗ ವೃತ್ತ, ಶಿವಮೊಗ್ಗ.

# ಅರಣ್ಯ ವೀಕ್ಷಕರ ಹುದ್ದೆಗೆ ಅರ್ಜಿ
# APPLICATION FORM FOR THE POST OF FOREST WATCHER

**(ಪ್ರಕಟಣೆ ಸಂಖ್ಯೆ: ........................................)**

ಕನ್ನಡ ಅಥವಾ ಆಂಗ್ಲ ಭಾಷೆಯ ಸ್ಪಷ್ಟ ಅಕ್ಷರಗಳಲ್ಲಿ ಭರ್ತಿ ಮಾಡಿ
Fill legibly in English (capitals) or Kannada letters only
ಯಾವುದೇ ಅರ್ಜಿ ಶುಲ್ಕ ಇರುವುದಿಲ್ಲ — There is no Application Fee
ಯಾವುದೇ ಪ್ರಮಾಣ ಪತ್ರ ಲಗತ್ತಿಸುವಂತಿಲ್ಲ. — No document to be enclosed
**ಸೂಚನೆ:** ಅರ್ಜಿಯೊಂದಿಗೆ 5 ರೂ. ಅಂಚೆ ಚೀಟಿ ಅಂಟಿಸಿದ ಸ್ವವಿಳಾಸವಿರುವ ಎರಡು ಲಕೋಟೆ ಮತ್ತು ಒಂದು ಅಂಚೆ ಕಾರ್ಡ್ ಲಗತ್ತಿಸಿ.

ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರ ಅಂಟಿಸಿ
Affix recent passport size Photograph

1 ಅಭ್ಯರ್ಥಿಯ ಹೆಸರು
Name of the Candidate

2 ಲಿಂಗ /Sex — ☐ ಪುರುಷ Male ☐ ಮಹಿಳೆ Female

3 ಜನ್ಮ ದಿನಾಂಕ / Date of Birth — ದಿನ Day ☐☐ ತಿಂಗಳು Month ☐☐ ವರ್ಷ Year ☐☐☐☐

4 ಪತ್ರ ವ್ಯವಹಾರಕ್ಕಾಗಿ ಪೂರ್ಣ ವಿಳಾಸ
Address for correspondence
PINCODE/ ಪಿನ್‌ಕೋಡ್ ☐☐☐☐☐☐

5 ವರ್ಗೀಕರಣ (ಅ) / Classification-A
ಸೂಕ್ತ ಅಂಕಣವನ್ನು ✓ ಟಿಕ್ ಮಾಡಿ
☐ ಸಾಮಾನ್ಯ ವರ್ಗ General Merit
☐ ಪ್ರವರ್ಗ-I Category-I
☐ ಪ್ರವರ್ಗ-II (ಎ) Category-II (a)
☐ ಪ್ರವರ್ಗ-II (ಬಿ) Category-II (b)
☐ ಪ್ರವರ್ಗ-III (ಎ) Category-III (a)
☐ ಪ್ರವರ್ಗ-III (ಬಿ) Category-III (b)
☐ ಪರಿಶಿಷ್ಟ ಜಾತಿ SC
☐ ಪರಿಶಿಷ್ಟ ಪಂಗಡ ST

6 ವರ್ಗೀಕರಣ (ಆ) / Classification - B
ಸೂಕ್ತ ಅಂಕಣವನ್ನು ✓ ಟಿಕ್ ಮಾಡಿ
☐ ಕನ್ನಡ ಮಾಧ್ಯಮ ಅಭ್ಯರ್ಥಿ Kannada Medium Candidate
☐ ಗ್ರಾಮೀಣ Rural
☐ ಮಾಜಿ ಸೈನಿಕರು Ex-serviceman
☐ ಯೋಜನೆ ನಿರಾಶ್ರಿತರೆ Project displaced

7 ಅರಣ್ಯದಲ್ಲಿ ವಾಸಿಸುವ ಪರಿಶಿಷ್ಟ ಪಂಗಡದವರಾಗಿದ್ದರೆ, ಜಾತಿಯ ಹೆಸರನ್ನು ನಮೂದಿಸಿ.
Do you belong to any of the forest dwelling Scheduled tribes. If so, mention the caste.

8 7ನೇ ತರಗತಿ ಉತ್ತೀರ್ಣರಾದ ವರ್ಷ
Year of passing 7th Standard ☐☐☐☐

9 7ನೇ ತರಗತಿ ಅಭ್ಯಾಸ ಮಾಡಿದ ಶಾಲೆಯ ಹೆಸರು
Name of the 7th Standard passing school.

10 ನೇಮಕಾತಿ ಲಿಖಿತ ಪರೀಕ್ಷೆಗೆ ಆಯ್ದುಕೊಂಡ ಮಾಧ್ಯಮ
Medium opted for Recruitment written test — ☐ ಕನ್ನಡ Kannada ☐ ಇಂಗ್ಲೀಷ್ English

ಮೇಲಿನ ಮಾಹಿತಿಗಳು ಸತ್ಯವಾಗಿವೆ ಎಂದು ಪ್ರಮಾಣ ಮಾಡುತ್ತೇನೆ.

Place ಸ್ಥಳ
Date ದಿನಾಂಕ

ಅಭ್ಯರ್ಥಿಯ ಸಹಿ
Signature of the Candidate

ಪಿ.ಆರ್. 110